# ಸಂಸ್ಕಾರ ಮತ್ತು ವಂಶವೃಕ್ಷ ಕಾದಂಬರಿಗಳ ತೌಲನಿಕ ಅಧ್ಯಯನ

(ಕನ್ನಡ ಎಂ.ಫಿಲ್ ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲಿರುವ
ಸಂಶೋಧನಾ ನಿಬಂಧ)



ಸಂಶೋಧನಾ ವಿದ್ಯಾರ್ಥಿ

ರಿ.ನಂ ೧೪೧೨೦೧೦೩೦೦೫೧




**ಕನ್ನಡ ವಿಶ್ವವಿದ್ಯಾಲಯ, ಹಂಪಿ**
**ವಿದ್ಯಾರಣ್ಯ; ಹೊಸಪೇಟೆ ತಾಲ್ಲೂಕು**

2015

# ಸಂಸ್ಕಾರ ಮತ್ತು ವಂಶವೃಕ್ಷ ಕಾದಂಬರಿಗಳ ತೌಲನಿಕ ಅಧ್ಯಯನ

(ಕನ್ನಡ ಎಂ.ಫಿಲ್ ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲಿರುವ ಸಂಶೋಧನಾ ನಿಬಂಧ)



ಸಂಶೋಧನಾ ವಿದ್ಯಾರ್ಥಿ - ಮೂರ್ತಿ ಎಂ. ಹೆಚ್

ರಿ.ನಂ ೧೪೧೨೦೧೦೩೦೦೫೧

ಮಾರ್ಗದರ್ಶಕರು - ಡಾ. ಎಂ. ರಾಮಕೃಷ್ಣ




ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ; ಹೊಸಪೇಟೆ ತಾಲ್ಲೂಕು

2015

# ಸಂಸ್ಕಾರ ಮತ್ತು ವಂಶವೃಕ್ಷ ಕಾದಂಬರಿಗಳ ತೌಲನಿಕ ಅಧ್ಯಯನ

## ಪರಿವಿಡಿ

## ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಕನ್ನಡ ಎಂ.ಫಿಲ್., ಪದವಿಗಾಗಿ ನಡೆಸುತ್ತಿರುವ ಅಧ್ಯಯನದ ಅಂಗವಾಗಿ ರಚಿಸಬೇಕಾಗಿರುವ ಸಂಶೋಧನಾ ನಿಬಂಧಕ್ಕೆ ವಿಷಯವಾಗಿ ಕನ್ನಡ ಸಾಹಿತ್ಯಲೋಕ ಕಂಡ ಸೃಜನಶೀಲ, ನವ್ಯ ಸಾಹಿತ್ಯದ ಅಪರೂಪದ ಲೇಖಕರಾದ **'ಯು.ಆರ್.ಅನಂತಮೂರ್ತಿ'** ಅವರು ರಚಿಸಿರುವ **'ಸಂಸ್ಕಾರ'** ಕಾದಂಬರಿ ಮತ್ತು ಕನ್ನಡದ ಸೃಜನಶೀಲ ಬರಹಗಾರರಾದ **'ಎಸ್.ಎಲ್.ಭೈರಪ್ಪ'**ನವರು ಬರೆದಿರುವ **'ವಂಶವೃಕ್ಷ'** ಕಾದಂಬರಿಗಳನ್ನು ಆಯ್ಕೆ ಮಾಡಿಕೊಂಡು ತೌಲನಿಕ ಅಧ್ಯಯನ ಮಾಡುವುದು ಇದರ ಉದ್ದೇಶವಾಗಿದೆ. ಕನ್ನಡದ ನವ್ಯ ಸಾಹಿತ್ಯದ ಕೃತಿಗಳಲ್ಲಿ ಒಂದಾದ 'ಸಂಸ್ಕಾರ' ಕಾದಂಬರಿಯಲ್ಲಿ 'ನಾರಣಪ್ಪನ' ಶವ ಸಂಸ್ಕಾರದ ಸುತ್ತ ನಡೆಯುವ ಚರ್ಚೆ, ಹಾಗೂ ಉದ್ಭವಿಸುವ ಸಮಸ್ಯೆಗಳನ್ನು ವಿಶ್ಲೇಷಿಸುವುದು. ಸಾವಿನ ಅಪವತ್ರತೆಯನ್ನು ಸಂಸ್ಕಾರದ ಧರ್ಮವಿಧಿಯ ಮೂಲಕ ಪವಿತ್ರಗೊಳಿಸುವುದು, ದೂರ್ವಾಸಪುರದ ಬ್ರಾಹ್ಮಣ ಸಮಾಜದಲ್ಲಿರುವ ಸಂಪ್ರದಾಯ, ಆಚರಣೆಗಳು, ಮೌಢ್ಯತೆಗಳು, ರೀತಿ–ನೀತಿ, ನಿಯಮಗಳನ್ನು ಹಾಗೂ ಜಾತಿಗೆಟ್ಟ ನಾರಣಪ್ಪನ ಶವ–ಸಂಸ್ಕಾರ ಮಾಡುವುದು ಧರ್ಮದ ವಿಧಿಗೆ ಅರ್ಹವೇ? ಎಂಬ ಪ್ರಶ್ನೆಯೊಂದಿಗೆ ಚರ್ಚೆಗಾಗಿ ಪ್ರಾಣೇಶಾಚಾರ್ಯರನ್ನು ಭೇಟಿ ಮಾಡಿ ಅವರ ಮುಂದೆ ಪರಿಹಾರಕ್ಕಾಗಿ ಅಗ್ರಹಾರದ ಬ್ರಾಹ್ಮಣರು ಸೂಕ್ತ ನಿರ್ಣಯ ಕೋರುವುದು, ಇದರ ಜೊತೆಗೆ ಕಾದಂಬರಿಯಲ್ಲಿ ಬರುವಂತಹ ಪಾತ್ರಗಳ ಮನೋಭಾವ ಮತ್ತು ಸ್ವಾರ್ಥದ ಚಿಂತನೆಯ ಅಭಿವ್ಯಕ್ತಿಯನ್ನು ವಿವರಿಸುವುದು. ಪ್ರಾಣೇಶಾಚಾರ್ಯ, ಚಂದ್ರಿ, ನಾರಣಪ್ಪ, ಗರುಡಾಚಾರಿ, ಲಕ್ಷ್ಮಣಾಚಾರ್ಯ, ದುರ್ಗಾಶೆಟ್ಟಿ, ಪುಟ್ಟು, ಪದ್ಮಾವತಿ, ಬೆಳ್ಳಿ, ಮಂಜಯ್ಯ, ಮಹಾಬಲ ಮುಂತಾದ ಪಾತ್ರಚಿತ್ರಣಗಳನ್ನು ವಿಶ್ಲೇಷಿಸುವುದು. ನಾರಣಪ್ಪನ ಸಾವಿನ ಸುದ್ದಿಯೊಂದಿಗೆ ಕಥೆ ಪ್ರಾರಂಭವಾಗಿ ಕೊನೆಗೆ ಪ್ರಾಣೇಶಾಚಾರ್ಯರ ಆತ್ಮಸಂಸ್ಕಾರದೊಂದಿಗೆ ಮಧ್ಯೆ ಮಧ್ಯೆ ತನ್ನನ್ನು ತಾನು ಅರಿತುಕೊಳ್ಳಲು ಮಾಡುತ್ತಿದ್ದ ಸತತ ಪ್ರಯತ್ನ, ಅವರಲ್ಲಿ ಉದ್ಭವಿಸುತ್ತಿದ್ದ ದ್ವಂದ್ವ ಮತ್ತು ಅದರಿಂದ ಮೂಡಿದ ಸಂಘರ್ಷಗಳು ಬ್ರಾಹ್ಮಣ ಜೀವನವನ್ನು ಬದಲಾಯಿಸುತ್ತವೆ. ಅಗ್ರಹಾರದ ಬ್ರಾಹ್ಮಣ ಸಮಾಜ ನಿರ್ಮಿಸಿದ್ದ ಗೊಡ್ಡು ಸಂಪ್ರದಾಯಗಳಲ್ಲಿ ಬಂಧಿಯಾಗಿದ್ದು ತಮ್ಮ ತಮ್ಮಲ್ಲೇಯೇ ಉದ್ಭವಿಸಿದ ಸಮಸ್ಯೆಗಳಿಂದಾಗಿ ಯಾವ ರೀತಿಯಲ್ಲಿ ಬದಲಾವಣೆಯಾಗುತ್ತದೆ ಹಾಗೂ ಸಂಸ್ಕಾರದಿಂದ ಮೂಡಿದ ಸಂಘರ್ಷಗಳು ಅವರ ಜೀವನವನ್ನೇ ಬದಲಾಯಿಸಿದ ಅಂಶಗಳನ್ನು ಮತ್ತು ಅಗ್ರಹಾರ ಬ್ರಾಹ್ಮಣರ ಮನಸ್ಥಿತಿಗಳನ್ನು ವಿಶ್ಲೇಷಿಸುವುದಾಗಿದೆ. ಚಂದ್ರಿಯ ಮನೋಭಾವ, ಪ್ರಾಣೇಶಚಾರ್ಯರು ಚಂದ್ರಿಯರ ನಡುವಿನ ಸಮಾಗಮದ ಸಂದರ್ಭ, ಮುಸಲ್ಮಾನರ ಸಹಾಯ ಪಡೆದು ಚಂದ್ರಿ ನಾರಣಪ್ಪನ ಶವ ಸಂಸ್ಕಾರ ಮಾಡಿಸುವುದು.

ಇದರಿಂದಾಗಿ ಬ್ರಾಹ್ಮಣರಲ್ಲಿ ಉಂಟಾದ ಅಡ್ಡಿ–ಆತಂಕಗಳನ್ನು ಪರಿಹಾರ ಮಾಡಿಕೊಳ್ಳಲು ಕಂಡುಕೊಳ್ಳುವ ಉಪಾಯಗಳು, ಬ್ರಾಹ್ಮಣರ ಸ್ವಾರ್ಥದ ಮನೋಭಾವಗಳು, ಅಗ್ರಹಾರಕ್ಕೆ ಪ್ಲೇಗ್ ರೋಗ ತಗಲುವುದು ಇದರ ಮೂಲಕ ಮೌಢ್ಯತೆ, ಧರ್ಮ, ಶಾಸ್ತ್ರ, ನಿಯಮಗಳ ಸಂಕೋಲೆಗಳ ಸುತ್ತ ಪಾತ್ರ ಚಿತ್ರಣಗಳನ್ನ ವಿಶ್ಲೇಷಣೆ ಮಾಡುವುದು ಅಧ್ಯಯನದ ಉದ್ದೇಶವಾಗಿದೆ.

ಕನ್ನಡದ ಸುಪ್ರಸಿದ್ಧ ಕಾದಂಬರಿಕಾರರಾದ ಎಸ್.ಎಲ್.ಭೈರಪ್ಪನವರು ರಚಿಸಿರುವ **'ವಂಶವೃಕ್ಷ'** ಕಾದಂಬರಿಯಲ್ಲಿ ಮಾನವ ಬದುಕಿನ ಸಂಬಂಧಗಳ ಸೂಕ್ಷ್ಮ ಸಂಕೀರ್ಣ ನೆಲೆಗಳ ಆಳಕ್ಕಿಳಿದು ಆ ಮೂಲಕ ವೈಜ್ಞಾನಿಕವಾಗಿ ಬದುಕನ್ನು ಕಟ್ಟಿಕೊಳ್ಳಬೇಕಾದ ಅನಿವಾರ್ಯತೆ, ಮೂಲಭೂತ ಸಮಸ್ಯೆ, ಧರ್ಮ-ಕರ್ಮಗಳು, ಸಂಸ್ಕೃತಿ, ಬ್ರಾಹ್ಮಣತ್ವದ ಬಗೆಗಿನ ಗಂಭೀರವಾದ ವಿವರ, ಕರ್ಮತತ್ವ ಅದಕ್ಕೆ ಸಂಬಂಧಿಸಿದ ಋಣಾನುಬಂಧ, ಹಣೆಬರಹದ ಕಲ್ಪನೆಗಳ ಬಗೆಗೆ ವಿಶ್ಲೇಷಣೆ ಮಾಡುವುದು.

ವಂಶವೃಕ್ಷ ಕಾದಂಬರಿಯಲ್ಲಿನ ಕಥವಿನ್ಯಾಸ ಇದರಲ್ಲಿ ಎರಡು ಕುಟುಂಬಗಳ ಕಥೆ ಜೊತೆ ಜೊತೆಯಾಗಿ ಸಾಗಿ ಅಲ್ಲಲ್ಲಿ ಸಂಧಿಸುತ್ತ ಮತ್ತೆ ಬೇರೆ ಬೇರೆಯಾಗಿ ಮುಂದುವರಿಯುವ ಕಥಾ ವಿನ್ಯಾಸದ ತಂತ್ರಗಳ ಬೆಳವಣಿಗೆಯ ವಿವರಗಳು, ಕಥನತಂತ್ರ, ಪಾತ್ರ, ಸನ್ನಿವೇಶಗಳ ವಿಮರ್ಶೆ ಮಾಡುವುದು. ಕಾದಂಬರಿಯಲ್ಲಿ ವ್ಯಕ್ತವಾಗಿರುವ ವೈಚಾರಿಕತೆ, ತಾತ್ವಿಕ ನಿಲುವುಗಳು ಮತ್ತು ಸಂದಿಗ್ಧತೆಗಳು, ಮಾನವೀಯತೆ ಇವುಗಳನ್ನು ಶೋಧಿಸುವುದು. ಶ್ರೀನಿವಾಸಶ್ರೋತ್ರಿ, ಕಾತ್ಯಾಯಿನಿ, ಸದಾಶಿವರಾಯ, ಕರುಣರತ್ನೆ, ರಾಜು, ನಾಗಲಕ್ಷ್ಮಿ, ಚೀನಿ, ಪೃಥ್ವಿ, ಭಾಗೀರತಮ್ಮ, ಲಕ್ಷ್ಮಿ ಈ ಪಾತ್ರಗಳ ಮನೋಭಾವಗಳ ವಿಶ್ಲೇಷಣೆ, ಕಾದಂಬರಿಯಲ್ಲಿ ಬರುವ ಪ್ರಮುಖ ಸನ್ನಿವೇಶಗಳು, ಜಾತಿ ವ್ಯವಸ್ಥೆ, ನಂಬಿಕೆ, ಧರ್ಮ ಮುಂತಾದ ಅಂಶಗಳನ್ನು ವಿಶ್ಲೇಷಣೆ ಮಾಡುವುದು. ಕಾದಂಬರಿಯಲ್ಲಿ ಶ್ರೀನಿವಾಶ್ರೋತ್ರಿಯವರ ಯಜಮಾನಿಕ, ಕಾತ್ಯಾಯಿನಿಯರ ವ್ಯಕ್ತಿ ಸ್ವಾತಂತ್ರ್ಯ ಹಾಗೂ ಕೆಲವು ಸನ್ನಿವೇಶಗಳನ್ನು ವಿಶ್ಲೇಷಿಸುವುದು ಅಧ್ಯಯನದ ಉದ್ದೇಶವಾಗಿದೆ.

ಸಂಸ್ಕಾರ – ವಂಶವೃಕ್ಷ ಕಾದಂಬರಿಗಳಲ್ಲಿನ ವಸ್ತು- ವಿನ್ಯಾಸ ಪ್ರಮುಖ ಸನ್ನಿವೇಶಗಳ ಚಿತ್ರಣ, ಪಾತ್ರ ವಿಶ್ಲೇಷಣೆ, ಕಾದಂಬರಿಗಳ ಶೈಲಿ, ಕಾದಂಬರಿಕಾರರ ದೃಷ್ಟಿ-ಧೋರಣೆ ಇವುಗಳನ್ನು ತೌಲನಿಕವಾಗಿ ಅಧ್ಯಯನ ಮಾಡುವುದು. ಈ ಎರಡೂ ಕಾದಂಬರಿಗಳಲ್ಲಿ ಮಾನವನ ಬದುಕಿನಲ್ಲಿ ಜಾತಿಯನ್ನು ಮೀರಿ ಬದುಕನ್ನು ಅನುಭವಿಸುವ ಹಾಗೂ ಧರ್ಮದ ಕಟ್ಟುಪಾಡು ಮೌಢ್ಯತೆ, ಸಂಪ್ರದಾಯಗಳನ್ನು ಮೀರಿ ಮಾನವ ಸಹಜವಾದ ದೈಹಿಕ ಹಂಬಲ ಕಾದಂಬರಿಗಲ್ಲಿ ಬರುವಂತಹ ಕಥಾ ವಿನ್ಯಾಸದಲ್ಲಿ ಬ್ರಾಹ್ಮಣತ್ವ ನಿಲುವಿನ ಸಮರ್ಥನೆ ಮತ್ತು ಬ್ರಾಹ್ಮಣತ್ವದ ನಿಯಮಗಳನ್ನು ಮೀರುವ ಅದರಾಚೆಗಿನ ಬದುಕಿನ ಸುಂದರ ಚಿತ್ರಣಗಳನ್ನು ಕುರಿತು ಇಲ್ಲಿ ವಿಶ್ಲೇಷಿಸುವುದಾಗಿದೆ. ಮಾನವ ಸಹಜ ಬಯಕೆಗಳು ಧರ್ಮದ ಯಾವ ನಿಯಮಗಳನ್ನು ಲೆಕ್ಕಿಸದಿರುವುದು ಎರಡೂ ಕಾದಂಬರಿಗಲ್ಲಿ ಚಿತ್ರಿತವಾಗಿದೆ. ನಾರಾಣಪ್ಪ – ಚಂದ್ರಿ, ಪ್ರಾಣೇಶಾಚಾರ್ಯ-ಚಂದ್ರಿ ಇವರ ನಡುವಿನ ಸಂಬಂಧಕ್ಕೂ ಕಾತ್ಯಾಯಿನಿ-ರಾಜರಾಯ ಮತ್ತು ಸದಾಶಿವರಾಯ-ಕರುಣಾರತ್ನೆ ಇವರುಗಳ ಸಂಬಂಧದ ವಿಚಾರಗಳನ್ನು ತೌಲನಿಕವಾಗಿ ಅಧ್ಯಯನ ಮಾಡುವುದಾಗಿದೆ.

ಎರಡೂ ಕಾದಂಬರಿಗಳು ಬ್ರಾಹ್ಮಣ ಧರ್ಮದ ವಿಚಾರಗಳನ್ನು ವ್ಯಕ್ತಪಡಿಸಿದರು ಎರಡೂ ಕಾದಂರಿಗಳಲ್ಲಿ ವೈವಿಧ್ಯಮಯವಾದ ವ್ಯತ್ಯಾಸಗಳನ್ನು ಮತ್ತು ಕೆಲವು ಸಾಮ್ಯತೆಗಳಿವೆ. ಈ ಅಂಶಗಳನ್ನು

ಚರ್ಚಿಸಿ ವ್ಯಕ್ತಪಡಿಸುವುದು ಇದರ ಮುಖ್ಯ ಉದ್ದೇಶವಾಗಿದೆ. ಇಬ್ಬರೂ ಲೇಖಕರುಗಳ ನಿಲುವುಗಳು, ತತ್ವ-ಚಿಂತನೆಗಳು ವಸ್ತು ವಿನ್ಯಾಸ, ಪಾತ್ರ ಚಿತ್ರಣ, ಬದುಕಿನ ಸೂಕ್ಷ್ಮತೆ, ಮಾನವೀಯ ವಿಚಾರಗಳು, ಮಾನವ ಬದುಕಿನ ದ್ವಂದ್ವತೆ, ಕೊನೆಯಲ್ಲಿ ತಳೆಯುವ ನಿಲುವು, ಧರ್ಮದ ವಿಚಾರಗಳನ್ನು ಎತ್ತಿಕೊಂಡು ವಿವರವಾಗಿ ನಿರೂಪಿಸುವುದು ಈ ತೌಲನಿಕ ಅಧ್ಯಯನದ ಉದ್ದೇಶವಾಗಿದೆ. ಲೇಖಕರುಗಳು ಬಳಸಿರುವ ಭಾಷೆ, ಶೈಲಿ, ತಂತ್ರ, ಕಥಾ-ನಿರೂಪಣೆ, ಸಮಾಜಕ್ಕೆ ಕೊಡಬಯಸುವ ಸಂದೇಶಗಳು, ಕಾದಂಬರಿಗಳ ಬೆಳವಣಿಗೆ, ಪಡೆದುಕೊಳ್ಳುವ ತಿರುವುಗಳು ಆಧುನಿಕ ಸಮಾಜದ ಮೌಲ್ಯಗಳು ಪರಂಪರೆಯ ಬದುಕಿನಲ್ಲಿ ಎಬ್ಬಿಸುವ ಸಮಸ್ಯೆಗಳು ಎರಡರಲ್ಲೂ ಧರ್ಮದ ಬಗೆಗಿನ ವಿಶ್ವಾಸ ಮತ್ತು ತರ್ಕಬದ್ಧವಾದ ಮಾನವೀಯತೆಗಳನ್ನು ಮುಖಾಮುಖಿಯಾಗಿ ನಿಲ್ಲಿಸುವ ಮತ್ತು ನಿರೂಪಿಸುವ ಅಂಶಗಳು ಇವುಗಳ ಜೊತೆಗೆ ಪಾತ್ರಗಳು ಸಂಪ್ರದಾಯವನ್ನು ತಿರಸ್ಕರಿಸಿ ಆಧುನಿಕತೆಯನ್ನು ಒಪ್ಪಿಕೊಳ್ಳುವುದು ಸಂಸ್ಕಾರ ಕಾದಂಬರಿಯಲ್ಲಿದೆ. ಹಾಗೂ ಆಧುನಿಕತೆಯನ್ನು ತಿರಸ್ಕರಿಸಿ ಸಂಪ್ರದಾಯಕ್ಕೆ ಮರಳುವ ಚಿತ್ರಣ ವಂಶವೃಕ್ಷ ಕಾದಂಬರಿಯಲ್ಲಿದೆ. ಇವುಗಳನ್ನು ತೌಲನಿಕ ದೃಷ್ಟಿಕೋನದಿಂದ ಅಧ್ಯಯನ ಮಾಡಿ ಅದರಲ್ಲಿ ಇರುವಂತ ಸಾಮ್ಯತೆಗಳನ್ನು ಮತ್ತು ವಿರುದ್ಧವಾದ ಅಂಶಗಳನ್ನು ಅಧ್ಯಯನ ಮಾಡುವುದು ಈ ಅಧ್ಯಯನದ ಉದ್ದೇಶವಾಗಿದೆ.

ಅಧ್ಯಾಯ – 1

## ಕಾದಂಬರಿಗಳ ವಸ್ತು ವಿನ್ಯಾಸ

ಯು.ಆರ್.ಅನಂತಮೂರ್ತಿಯವರ **'ಸಂಸ್ಕಾರ'** ಕಾದಂಬರಿಯು ಕನ್ನಡ ನವ್ಯ ಸಾಹಿತ್ಯದ ಅಪೂರ್ವವಾದ ಕಾದಂಬರಿಗಳಲ್ಲಿ ಒಂದು. ಈ ಕಾದಂಬರಿಯು ಕನ್ನಡ ವಿಮರ್ಶೆಯಲ್ಲಿ ಹೆಚ್ಚು ಚರ್ಚೆಗೆ ಬಂದಿರುವ ಕೃತಿಯಾಗಿದೆ. ಪ್ರಾಣೇಶಾಚಾರ್ಯರು ಮದುವೆ ಆದಾಗಿನಿಂದಲೂ ರೋಗಿಷ್ಠಳಾಗಿ ಹಾಸಿಗೆ ಹಿಡಿದಿರುವ ತನ್ನ ಹೆಂಡತಿ ಭಾಗೀರಥಿಯನ್ನು ನೋಡಿಕೊಂಡು ಅಗ್ರಹಾರ ಒಂದರಲ್ಲಿ ಹಲವು ದಶಕಗಳ ಪರಂಪರಾಗತವಾದ ಬ್ರಾಹ್ಮಣತ್ವದ ಮೌಲ್ಯಗಳನ್ನು ನೆಚ್ಚಿಕೊಂಡು ನಸುಕಿನ ಸ್ನಾನ, ಸಂಧ್ಯಾವಂದನೆ, ಅಡಿಗೆ, ಹೆಂಡತಿಗೆ ಮದ್ದು ಹೊಳೆದಾಟಿ ಹೋಗಿ ಗುಡಿಯ ಮಾರುತಿ ಪೂಜೆ, ಇವುಗಳ ಜೊತೆಗೆ ಪುರಾಣಪುಣ್ಯ ಕಥೆಗಳ ವಾಚನ ಮಾಡುತ್ತಿದ್ದು ಇಡೀ ಅಗ್ರಹಾರದ ಬ್ರಾಹ್ಮಣರೆಲ್ಲರು ಊಟವಾದ ಮೇಲೆ ಪ್ರಾಣೇಶಾಚಾರ್ಯರ ಬಳಿಗೆ ಬಂದು ಪ್ರವಚನ ಕೇಳುತ್ತಿರುತ್ತಾರೆ. ಹೀಗೆ ಪರಂಪರಾಗತವಾದ ಮೌಲ್ಯಗಳನ್ನು ನೆಚ್ಚಿಕೊಂಡು ಬದುಕುತ್ತಿದ್ದ ಬ್ರಾಹ್ಮಣರಿಗೆ ಪ್ರಾಣೆಶಾಚರ್ಯರೇ ಮುಖ್ಯರಾಗಿರುತ್ತಾರೆ. ಪ್ರಾಣೇಶಾಚಾರ್ಯರು ಊಟಕ್ಕೆ ಕೂರುವ ಮುನ್ನ ಅದೇ ಅಗ್ರಹಾರದ ಬ್ರಾಹ್ಮಣನಾದ ನಾರಣಪ್ಪನ ಸೂಳೆಯಾದ ಚಂದ್ರಿಯು ಆಚಾರ್ಯರೆ ಎಂದು ಪ್ರಾಣೇಶಾಚಾರ್ಯರನ್ನು ಕೂಗುತ್ತಾಳೆ. ಚಂದ್ರಿಯು ಅವರಿಗೆ 'ನಾರಣಪ್ಪನ ಸಾವಿನ ಸುದ್ದಿಯನ್ನು ಮುಟ್ಟಿಸುತ್ತಾಳೆ'. ನಾರಣಪ್ಪನ ಸಾವಿನ ವಿಚಾರವಾಗಿ ನಡೆಯುವ ಚರ್ಚೆಯೊಂದಿಗೆ ಕಾದಂಬರಿ ಆರಂಭವಾಗುತ್ತದೆ. ನಾರಣಪ್ಪ ಬ್ರಾಹ್ಮಣನಾದರು ಅಗ್ರಹಾರದ ಬ್ರಾಹ್ಮಣರ ಸಮಾಜದ ಗೊಡ್ಡು ಸಂಪ್ರದಾಯಗಳಿಗೆ ಸೆಡ್ಡು ಹೊಡೆದು ಸಂಪ್ರದಾಯ, ಧರ್ಮ, ಶಾಸ್ತ್ರಗಳೆಂಬ ಸಂಕೋಲೆಗಳನ್ನು ಕಳಚಿ ಮುಸ್ಲಿಮರ ಜೊತೆ ಸೇರುವುದು, ಮಾಂಸಹಾರ ಮಾಡುವುದು, ಮಧ್ಯಪಾನ ಮಾಡುವುದು, ಜಾತಿಕೆಟ್ಟ ಚಂದ್ರಿಯ ಜೊತೆ ಅನೈತಿಕ ಸಂಬಂಧ ಹೊಂದಿದ್ದು. ಈಗ ಶಿವಮೊಗ್ಗಕ್ಕೆ ಹೋಗಿ ಬಂದು ನಾಲ್ಕು ದಿನದಿಂದ ಜ್ವರ ಬಂದು, ಪಕ್ಕೆಯ ಹತ್ತಿರ ಗೆಡ್ಡೆಯೆದ್ದು ನೋವಿನಿಂದ ಸಾವನಪ್ಪಿದ್ದಾನೆ.

ಈ ವಿಚಾರ ತಿಳಿದ ಪ್ರಾಣೇಶಾಚಾರ್ಯರು ಅಗ್ರಹಾರದ ಬ್ರಾಹ್ಮಣರಾದ ಗರುಡಾಚಾರ್ಯನ ಮನೆಗೆ ಹೋಗಿ ಸುದ್ದಿ ತಿಳಿಸಿದರು. ಕಾರಣ ನಾರಣಪ್ಪ ಗರುಡಾಚಾರ್ಯನ ಐದು ತಲೆಮಾರಿನ ಸಂಬಂಧವಿತ್ತು. ಅನಂತರ ಪ್ರಾಣೇಶಾಚಾರ್ಯ ಉಡುಪಿಯ ಲಕ್ಷ್ಮಣಾಚಾರ್ಯನಿಗೆ ಅರೆ ಮರುಳೂ ಲಕ್ಷ್ಮೀದೇವಮ್ಮ, ಕೆಳಮನೆ ದುರ್ಗಾಭಟ್ಟರಿಗೆ ಸುದ್ದಿ ಮುಟ್ಟಿಸಿದರು. ಸುದ್ದಿಯು ಕಿಚ್ಚಿನಂತೆ ಇಡೀ ಅಗ್ರಹಾರದ ಎಲ್ಲ ಮನೆಗಳಗೂ ಹಬ್ಬಿತು ಹೀಗೆ ನಾರಣಪ್ಪನ ಸಾವಿನ ಸುದ್ದಿ ತಿಳಿದು ಒಬ್ಬರಿಗೂ ವ್ಯಥೆಯಾಗದಿದ್ದರೂ ಕೂಡ ಎಲ್ಲರ ಮನ್ಸಿನಲ್ಲೂ ಒಂದು ರೀತಿಯ ಅವ್ಯಕ್ತ, ಅಪರಿಚಿತ ಭೀತಿ, ಕಳವಳ ಹುಟ್ಟಿತು. 1.**"ಬದುಕಿನಲ್ಲಿ ವೈರಿ, ಸತ್ತು ಅನ್ನಕಂಟಕ ಶವವಾಗಿ ಇನ್ನೂ ಸಮಸ್ಯೆ"** ಎಂದು ತನ್ನ ಷಡಕನನ್ನು ಶಪಿಸುತ್ತ ಉಡುಪಿ ಲಕ್ಷ್ಮಣಾಚಾರ್ಯ ಬಯ್ಯುತ್ತ ಕೈ ತೊಳೆದ ಹೀಗೆ ಎಲ್ಲರು ಪ್ರಾಣೇಶಾಚಾರ್ಯರ ತೀರ್ಮಾನದ ಹೊರತಾಗಿ ನೀವಾಗಿ ಶವಸಂಸ್ಕಾರ ಮಾಡಾಬಾರದೆಂದು ಹೆಂಗಸರು ತಮ್ಮ ಗಂಡಂದಿರಿಗೆ ಹೇಳಿ ಕಳುಹಿಸಿದರು. ನಾರಣಪ್ಪನ ಶವಸಂಸ್ಕಾರದ ಸುತ್ತ ಏಳುವ ಪ್ರಶ್ನೆಗಳ ಬಗ್ಗೆ ಚರ್ಚೆ ಇಡೀ ಕಾದಂಬರಿಯ ವಸ್ತುವಾಗಿದೆ.

ಸಂಸ್ಕಾರ –ಯು.ಆರ್.ಅನಂತಮೂರ್ತಿ, ಪುಟ–9.

1ನಾರಣಪ್ಪನ ಶವಸಂಸ್ಕಾರವಾಗಬೇಕು, ಮೊದಲನೆ ಪ್ರಶ್ನೆ ಅವನಿಗೆ ಮಕ್ಕಳಿಲ್ಲ, ಯಾರಾದರೂ ಅವನ ಬೊಜ್ಜ ಮಾಡಬೇಕು, ಎರಡನೇ ಪ್ರಶ್ನೆ ಮೊದಲನೆ ಪ್ರಶ್ನೆ ಅವನಿಗೆ ಮಕ್ಕಳಿಲ್ಲ, ಎರಡನೆಯ ಪಶ್ನೆ1. ಯಾರಾದರು ಉತ್ತರ ಕ್ರಿಯೆ ಮಾಡಬೇಕು, ಶವಸಂಸ್ಕಾರ ಆಗುವವರೆಗೂ ಯಾರು ಊಟ ಮಾಡುವಂತಿಲ್ಲ ಎಂಬ ಪ್ರಶ್ನೆಗಳಿಗೆ ಉತ್ತರವಾಗಿ ಪ್ರಾಣೇಶಾಚಾರ್ಯರು ಸಂಬಂಧಿಕರು ತಪ್ಪಿದರೆ, ಯಾವ ಬ್ರಾಹ್ಮಣನಾದರೂ ಮಾಡಬಹುದು ಎಂದು ಧರ್ಮಶಾಸ್ತ್ರದಲ್ಲಿದೆ ಎಂದು ಹೇಳುತ್ತಾರೆ. ಆದರೆ, ನಾರಣಪ್ಪನ ಸಂಬಂಧಿಗಳಾದ ಗರುಡಾಚಾರ್ಯ ಮತ್ತು ಲಕ್ಷ್ಮಣಾಚರ್ಯರು ತಮಗೂ ಇದಕ್ಕೂ ಸಂಬಂಧವಿಲ್ಲ ಎನ್ನುವ ಹಾಗೆ ಇದ್ದಾರೆ. ಇದಕ್ಕೆ ಕಾರಣ ಗರುಡಾಚಾರ್ಯ ಪ್ರಾಣೇಶಾಚಾರ್ಯರ ಮಾತಿಗೆ 'ನನಗೂ ಅವನಿಗೂ ಒಂದು ತಲೆತಲಾಂತರ ಸಂಬಂಧವಿದೆ'. ಆದರೆ ತೋಟದ ಕಾರಣಕ್ಕಗಿ ನನಗೂ ಆತನ ಅಪ್ಪನಿಗೂ ಜಗಳವಾಗಿ ಆಣೆ-ಭಾಷೆ ಆಗಿದೆ ಹೇಗೆ ಮಾಡುವುದು? ನಂತರ ಚಂದ್ರಿಯ ಮುಖ ನೋಡಿತ್ತಾ, "ನಾನು ಶವ ಸಂಸ್ಕರ ಮಾಡಬಹುದು ಗುರುಗಳೂ ಒಪ್ಪುತ್ತಾರೆ" ಶೂದ್ರಳ ಸಹವಾಸ ಮಾಡಿ ಅವನು ಬ್ರಾಹ್ಮಣ ಹೌದೊ! ಅಲ್ಲವೂ ಎಂಬುದು ಪ್ರಶ್ನೆ? ಏನು ಮಾಡುವುದೆಂದು ಕೇಳುತ್ತಾನೆ. ಆಗ ದುರ್ಗಾಶೆಟ್ಟಿ ದುಡುಕಬೇಡಿ ಆಚಾರ್ಯರೇ 2ಶೂದ್ರಳೊಬ್ಬಳನ್ನು ಸೂಳೆಯಾಗಿಟ್ಟುಕೊಂಡಾಕ್ಷಣ ಬ್ರಾಹ್ಮಣ್ಯ ನಾಶವಾಗಲ್ಲ2 ಎಂದು ಹೇಳುತ್ತಾನೆ. ಆನಂತರ ಪ್ರಾಣೇಶಾಚಾರ್ಯರು ಲಕ್ಷ್ಮಣಾಚಾರ್ಯನಿಗೆ "ನಾರಣಪ್ಪನಿಗೆ ನಿನ್ನ ಹೆಂಡತಿ ತಂಗಿಯನ್ನು ಕೊಟ್ಟಿತ್ತಲ್ಲ ನೀನು ಉತ್ತರಕ್ರಿಯೆ ಮಾಡು ಎಂದಾಗ ಲಕ್ಷ್ಮಣಾಚಾರ್ಯ, ನಮಗೆ ಏನು 3 ಧರ್ಮ ಸೂಕ್ಷ್ಮತೆ ಗೊತ್ತು? "ನಾರಣಪ್ಪ ಗರುಡಾಚಾರ್ಯ ಹೇಳಿದ ಹಾಗೆ ಕೀಳು ಜಾತಿಯ ಹೆಣ್ಣೊಂದರ ಸಂಪರ್ಕವನ್ನ ಹೊಂದಿದ್ದ ಅಲ್ಲದೆ ಅವಳು ಮಾಡಿದ ಅಡುಗೆಯನ್ನು ಊಟ ಮಾಡುತ್ತಿದ್ದ.3 ಅದು ಇರಲಿ ತಾಳಿ ಕಟ್ಟಿದ ತನ್ನ ಹೆಂಡತಿ ಬಿಟ್ಟು ಸತ್ತಹೆಂಡತಿ ಸಂಸ್ಕಾರ ಮಾಡಲಿಲ್ಲ, ಅದು ಅಲ್ಲದೆ ತನ್ನ ಸ್ವಂತ ಅಪ್ಪ-ಅಮ್ಮನ ಶ್ರಾದ್ಧವನ್ನು ಮಾಡಲಿಲ್ಲ, ಸಾಲಿಗ್ರಾಮವನ್ನು ನೀರಿಗೆ ಎಸೆದ, ಮುಸ್ಲೀಮರ ಕೂಡಿಕೊಂಡು ಮಾಂಸ ತಿಂದ ಕೇಳಿದರೆ ನಮ್ಮನ್ನು ಬೈದ. ಈಗಿರುವಾಗ ನಾವು ಶವಸಂಸ್ಕಾರ ಮಾಡುವುದು ಸರಿಯಲ್ಲ ಎಂದು ಉತ್ತರಕೊಟ್ಟರು.

ದುರ್ಗಾಭಟ್ಟರು ಸತ್ತವರ ತಪ್ಪನ್ನೂ ಹೆಕ್ಕಿ ಏನು ಪ್ರಯೋಜನ? ಪ್ರಾಣೇಶಾಚಾರ್ಯರೇ ಹೇಳಲಿ ಎಂದಾಗ ಗರುಡಾಚಾರ್ಯ ಅವನಿಗೂ ನನಗೂ ಆಣೆ-ಭಾಷೆ ಆಗಿದೆ ನಾರಣಪ್ಪ ಸತ್ಕುಲ ಪ್ರಸೂತನಾಗಿ ನಡೆದುಕೊಳ್ಳಲಿಲ್ಲ ಅಗ್ರಹಾರಕ್ಕೆ ಅಪಖ್ಯಾತಿ ತಂದ ಎಂದಾಗ ಇದು ಗಾಢವಾದ ಪ್ರಶ್ನೆ ಇದಕ್ಕೆ ಉತ್ತರ ನನಗೆ ಹೊಳೆಯುತ್ತಿಲ್ಲ. **4"ಅವನು ಬ್ರಾಹ್ಮಣ್ಯವನ್ನೂ ಬಿಟ್ಟರೂ ಬ್ರಾಹ್ಮಣ್ಯ ಅವನನ್ನು ಬಿಡಲಿಲ್ಲ"4** ಎಂಬೋದು. ಅವನಿಗೆ ಬಹಿಷ್ಕಾರ ಹಾಕಲಿಲ್ಲ ಶಾಸ್ತ್ರರೀತಿಯಲ್ಲಿ ಅವನು ಬಹಿಷ್ಕೃತನಾಗದೆ ಸತ್ತದ್ದರಿಂದ ಅವನು ಬ್ರಾಹ್ಮಣನಾಗಿಯೇ ಸತ್ತಂತೆ ಹಾಗೆ ವಿಚಾರ ಮಾಡಿದಲ್ಲಿ ಬ್ರಾಹ್ಮಣರಲ್ಲದವರಿಗೆ ಅವನ ಶವವನ್ನು ಮುಟ್ಟುವ ಅಧಿಕಾರವಿಲ್ಲ ಮುಟ್ಟಲು ಬಿಟ್ಟರೆ ಆಗಲೂ ನಮ್ಮ ಬ್ರಾಹ್ಮಣ್ಯಕ್ಕೂ ವಂಚನೆ ಬಂದಂತೆ ಇದಕ್ಕೆ ಧರ್ಮಶಾಸ್ತ್ರದಲ್ಲಿ ನಿವಾರಣೆ ಇದೆ. ಶಾಂತಿ ಮಾಡಿಸಬೇಕು ಗೋದಾನ ಮಾಡಬೇಕು. ಪುಣ್ಯಕ್ಷೇತ್ರಕ್ಕೆ

1. ಸಂಸ್ಕಾರ -ಯು.ಆರ್.ಅನಂತಮೂರ್ತಿ, ಪುಟ-9, 2013
2. ಸಂಸ್ಕಾರ -ಯು.ಆರ್.ಅನಂತಮೂರ್ತಿ, ಪುಟ-10, 2013
3. ಸಂಸ್ಕಾರ -ಯು.ಆರ್.ಅನಂತಮೂರ್ತಿ, ಪುಟ-11, 2013
4. ಸಂಸ್ಕಾರ -ಯು.ಆರ್.ಅನಂತಮೂರ್ತಿ, ಪುಟ-13, 2013

ಹೋಗಿಬರಬೇಕು ಇದು ಖರ್ಚಿನ ಪ್ರಶ್ನೆ ಎಂದಾಗ ಚಂದ್ರಿ ತನ್ನ ನಾಲ್ಕೆಳೆ ಬಂಗಾರದ ಸರ, ಕಡಗ, ಬಳೆಗಳನ್ನು ತಂದು ಪ್ರಾಣೇಶಾಚಾರ್ಯರ ಎದುರಿಗಿಡುತ್ತಾಳೆ. ಶವಸಂಸ್ಕಾರದ ಖರ್ಚಿಗಾಗಿ ಎಂದು ಆದರೆ ಬ್ರಾಹ್ಮಣರಿಗೆ ಭಯವಾಗುತ್ತದೆ. ಬಂಗಾರದ ಆಸೆಯಿಂದ ಬ್ರಾಹ್ಮಣತ್ವ ನಾಶವಾದರೆ ಎಂಬ ದಿಗಿಲಾಯಿತು. ಹಾಗದರೇ ಈಗ ನಾವುಗಳಲ್ಲದೆ ಬೇರೆ ಬ್ರಾಹಣ ನಾರಣಪ್ಪನ ಬೊಜ್ಜ ಮಾಡಬಹುದು ಎಂಬ ಉತ್ತರ ಹೊಳೆಯುತ್ತದೆ ಯಾರೂ ಮುಂದೆ ಬರದಿದ್ದಾಗ ಅಗ್ರಹಾರದಲ್ಲಿ ಹೆಣ ಇಟ್ಟುಕೊಂಡು ಕೈಕಟ್ಟಿ ಕೂರಲು ಸಾಧ್ಯವೇ? ಸನಾತನ ಧರ್ಮದ ಪ್ರಕಾರ ಅಗ್ರಹಾರದಿಂದ ಹೆಣಾ ತೆಗೆದುಕೊಂಡು ಹೋಗುವವರೆಗೂ ದೇವರ ಪೂಜೆ, ಸ್ನಾನ, ಸಂಧ್ಯಾವಂದನೆ, ಊಟ, ಉಪಚಾರ ಏನೂ ನಡೆಯುವುದಿಲ್ಲ, ಬಹಿಷ್ಕಾರ ಹಾಕಿಲ್ಲದಿರುವುದರಿಂದ ಬ್ರಾಹ್ಮಣರಲ್ಲದೆ ಬೇರೆ ಯಾರು ಅವನ ಹೆಣ ಮುಟ್ಟುವಂತಿಲ್ಲ ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ ಇರುವಾಗ ದಾಸಾಚಾರ್ಯನಿಗೆ ಒಂದು ವಿಚಾರ ಹೊಳೆಯಿತು. "ಅದರಂತೆ ಆತ ನಾರಣಪ್ಪನಿಗೆ ಪಾರಿಜಾತಪುರದ ಬ್ರಾಹ್ಮಣರಿಗೂ ಅವನಿಗೂ ಸ್ನೇಹವಿತ್ತು ಪರಸ್ಪರ ಊಟ ಉಪಚಾರವೂ ಇತ್ತು ಅಲ್ಲಿಗೆ ಹೋಗಿ ಅವರನ್ನ ಕೇಳಿಕೊಂಡು ನಾರಣಪ್ಪನ ಸಂಸ್ಕಾರ ಮುಗಿಸಬಹುದೆಂದು ತಿಳಿಸುತ್ತಾನೆ.

ಪಾರಿಜಾತ ಪುರದ ಬ್ರಾಹ್ಮಣರು ಅಡ್ಡಪಂಕ್ತಿ ಬ್ರಾಹ್ಮಣರು ಅಲ್ಲಿಯ ಮಂಜಯ್ಯನಿಗೆ ನಾರಣಪ್ಪನ ಸಾವಿನ ಸುದ್ದಿ ಮುಟ್ಟಿಸಬೇಕು ಎಂದನು. ಪಾರಿಜಾತ ಪುರದ ಮಂಜಯ್ಯ ನಾರಣಪ್ಪನ ಸಾವಿನ ಸುದ್ಧಿ ತಿಳಿದು ಮಿತ್ರ ವಿಯೋಗದಿಂದ ವ್ಯಥೆಪಟ್ಟನು. ಜೊತೆಗೆ ಮೇಲು ಜಾತಿಯ ಬ್ರಾಹ್ಮಣನೊಬ್ಬನ ಶವ ಸಂಸ್ಕಾರ ಮಾಡುವ ಸಂದರ್ಭ ದೊರೆಯಿತೆಂದು ಸಂತೋಷವೂ ಆಯಿತು. ಆದರೆ ಪಾರಿಜಾತಪುರದ ಪುರೋಹಿತನಾದ ಶಂಕರಯ್ಯ ಮೊದಲೇ ಕೀಳೆಂದು ಜರಿಸಿಕೊಂಡಿರುವವರು ನಮ್ಮವರು ಈಗ ನಾವು ಈ ಕಾರ್ಯ ಮಾಡಿದರೆ ಇನ್ನಷ್ಟು ಅಪಕೀರ್ತಿಗೆ ಪಾತ್ರರಾಗುತ್ತೇವೆ. ನಾವು ದುಡುಕಬಾರದು ಎಂದು ಹೇಳಿ ನಿಮ್ಮ ಪ್ರಾಣೇಶಾಚಾರ್ಯರೇ ಇದ್ದಾರಲ್ಲ ಅವರೇ ಅಪದ್ಧರ್ಮವೇನು? ಧರ್ಮಸೂಕ್ಷ್ಮವೇನು? ಎಂಬುದನ್ನ ತಿಳಿದಿದ್ದಾರೆಂದು ಅವರು ಅನುಮತಿಕೊಟ್ಟರೆ ನಾವು ನಾರಣಪ್ಪನ ಶವ ಸಂಸ್ಕಾರ ಮಾಡುತ್ತೇವೆ ಎಂದು ಹೇಳಿ ಕಳುಹಿಸಿದರು.

ಇತ್ತ ಪ್ರಾಣೇಶಾಚಾರ್ಯರು ಚಂದ್ರಿಯನ್ನು ಕುಳಿತುಕೊಳ್ಳಲು ಹೇಳಿ ಉದ್ಭವಿಸಿದ ಸಮಸ್ಯೆಗೆ ಪರಿಹಾರ ಕಂಡುಕೊಳ್ಳಲು ತಾಳೆಗರಿಗಳನ್ನು ಬಿಚ್ಚಿ ಧರ್ಮಶಾಸ್ತ್ರವನ್ನೂ ಹುಡುಕುತ್ತ ಕೂತರು. ಆಗ ನಾರಣಪ್ಪನ ವ್ಯಕ್ತಿತ್ವದ ಚಿತ್ರಣ ಪ್ರಾಣೇಶಾಚಾರ್ಯರ ಮನಸ್ಸಿಗೆ ಬಂದಿತು ಇತ್ತ ಕಡೆ ಅಗ್ರಹಾರದ ಬ್ರಾಹ್ಮಣರು ಹಸಿವು ಹೆಚ್ಚಾಗುತ್ತಿದೆ ಅಲ್ಲಿಗೆ ಬಂದ ಗರುಡಾಚಾರ್ಯ ಪ್ರಾಣೇಶಾಚಾರ್ಯರನ್ನು ಆಚಾರ್ಯರೇ ನಿಮ್ಮ ವಾಕ್ಯವೇ ನಮಗೆ ವೇದವಾಕ್ಯ ನಮಗೆ ಬಂಗಾರ ಬೇಡ ನೀವು ಹೇಳಿ ನಾಲ್ಕು ಜನ ಈ ಕ್ಷಣದಲ್ಲಿಯೇ ಆ ಹೆಣವನ್ನು ಎತ್ತಿ ತೆಗೆದುಕೊಂಡು ಹೋಗಿ ಸಂಸ್ಕಾರ ಮಾಡಿ ಬರುತ್ತೇನೆ. ಬಂಗಾರವನ್ನು ನಮ್ಮ ಸೇವಾರ್ಥವಾಗಿ ಮಾರುತಿಗೆ ಕಿರೀಟ ಮಾಡಿ ಹಾಕಿಸಿ ಎಂದಾಗ ಪ್ರಾಣೇಶಾಚಾರ್ಯನಿಗೆ ಥಟ್ಟನೆ ಸಾತ್ವಿಕ ಶಕ್ತಿ ಚಲಿಸಿದಂತಾಗಿ. ನೀವೆಲ್ಲ ಮನೆಗೆ ಹೋಗಿ ಇದಕ್ಕೆ ಪರಿಹಾರ ಕಂಡುಕೊಳ್ಳುತ್ತೇನೆ ಎಂದು ಮತ್ತೆ ಶಾಸ್ತ್ರಗಳನ್ನು ತಿರುವಿ ಹಾಕಿದರು. ಆದರೆ ಸೂಕ್ತವಾದ ಉತ್ತರ ದೊರೆಯಲಿಲ್ಲ ಧರ್ಮಶಾಸ್ತ್ರದಲ್ಲಿ ಈ

ಸಂದಿಗ್ಧಕ್ಕೆ ತನಗೆ ಸಂಪೂರ್ಣ ಸಮರ್ಪಕವೆನಿಸುವಂತಹ ಉತ್ತರವಿಲ್ಲವೆಂದು ಒಪ್ಪಿಕೊಳ್ಳಲು ಪ್ರಾಣೇಶಾಚಾರ್ಯರಿಗೆ ಭಯ ಆಗ ಒಂದು ಯೋಚನೆ ಮನಸ್ಸಿಗೆ ಹೊಳೆಯಿತು ಬೆಳಿಗ್ಗೆ ಹೋಗಿ ಮಾರುತಿಯಲ್ಲಿ ಅಪ್ಪಣೆ ಕೇಳುವುದು ಎಂದು ನಿಶ್ಚಯಿಸಿಕೊಂಡರು.

ಬೆಳಿಗ್ಗೆ ಎದ್ದು ಬುಟ್ಟಿ ಹಿಡಿದು ಅಗ್ರಹಾರದ ವೃಕ್ಷಗಳಿಂದ ಹೂಗಳನ್ನು ಕೊಯ್ದುಕೊಂಡು, ಹೊಳೆಯಲ್ಲಿ ಸ್ನಾನಮಾಡಿ ಮಾರುತಿಗುಡಿಗೆ ಹೋದರು. ಚಂದ್ರಿಯು ಅಲ್ಲಿಗೆ ಹೋದಳು ಮಾರುತಿ ಪ್ರಾಣೇಶಾಚಾರ್ಯರಿಗೆ ಯಾವ ಪ್ರಸಾದವನ್ನು ಕೊಡಲಿಲ್ಲ ಕೊನೆಗೆ ಪರಿಹಾರ ಕಂಡುಕೊಳ್ಳದೇ ಮನೆಗೆ ಹೋಗುವಾಗ ದಟ್ಟವಾದ ಕತ್ತಲಿನ ಕಾಡಿನಲ್ಲಿ ಹಿಂದಿನಿಂದ ಚಂದ್ರಿಯ ಹೆಜ್ಜೆಯ ಸಪ್ಪಳ ಕೇಳಿ ಯಾರು? ಎಂದಾಗ ನಾನು ಚಂದ್ರಿ ಎಂದು ಸಂಕೋಚದಿಂದ ಹೇಳಿದಳು. ಆಗ ಚಂದ್ರಿ ಮತ್ತು ಪ್ರಾಣೇಶಾಚಾರ್ಯರ ಆಕಸ್ಮಿಕ ಸಮಾಗಮವಾಯಿತು. ಅಲ್ಲಿಂದ ಹೊರಟ ಚಂದ್ರಿ ಗಾಡಿಶೇಷಪ್ಪನನ್ನು ಕೇಳಿಕೊಂಡಾಗ ಆತ ಒಪ್ಪದಿದ್ದಾಗ ಸೀದ ಮುಸಲ್ಮಾನರ ಕೇರಿಗೆ ಹೋಗಿ ಮೀನಿನ ವ್ಯಾಪಾರ ಮಾಡುತ್ತಿದ್ದ ಆಹ್ಮದ್‌ಬ್ಯಾರಿಯಿಂದ ನಾರಣಪ್ಪನ ಶವ ಸಂಸ್ಕಾರವನ್ನು ಮಾಡಿಸಿದಳು.

ಇತ್ತ ಪ್ರಾಣೇಶಾಚಾರ್ಯರು ನಾನು ಸೋತೆ ಮಾರುತಿಯ ಅಪ್ಪಣೆ ದೊರೆಯಲಿಲ್ಲ ನನಗೆ ಏನೂ ತಿಳಿಯದು. ಈಗ ನೀವು ನಿಮ್ಮ ಮನಸ್ಸಿಗೆ ಅನ್ನಿಸಿದನ್ನು ಮಾಡಿ ಎಂದಾಗ ಅಗ್ರಹಾರದ ಬ್ರಾಹ್ಮಣರು ಮಠದ ಸ್ವಾಮಿಯ ಬಳಿಗೆ ಹೋಗುತ್ತಾರೆ. ಇತ್ತ ಸತ್ತ ಹೆಂಡತಿಯ ಸಂಸ್ಕಾರ ಮಾಡಿ ಪ್ರಾಣೇಶಾಚಾರ್ಯರು ಕಾಡಿನ ದಾರಿ ಹಿಡಿದು ಮೇಳಿಗೆಯ ರಥೋತ್ಸವಕ್ಕೆ ಹೊರಟು. ಮಾಲೇರ ಪುಟ್ಟುವಿನ ಭೇಟಿಯಿಂದಾಗಿ ಶಿವಮೊಗ್ಗಕ್ಕೆ ಹೋಗುವುದು ಅಲ್ಲಿಂದ ಮತ್ತೆ ಅಗ್ರಹಾರಕ್ಕೆ ಬರುವುದು ಅಷ್ಟೊತ್ತಿಗೆ ಇಡೀ ಅಗ್ರಹಾರಕ್ಕೆ ಪ್ಲೇಗ್‌ರೋಗ ಹರಡಿರುವುದು ಇದಕ್ಕೆ ಕಾರಣ ನಾರಣಪ್ಪನ ಶವಸಂಸ್ಕಾರ ಮಾಡದಿರುವುದೇ ಇಷ್ಟಕ್ಕೆಲ್ಲ ಕಾರಣವೆಂದು ತಿಳಿದು ಮತ್ತೆ ಮೌಢ್ಯ ಸಂಪ್ರದಾಯದ ಅಂಶಗಳ ಬಗ್ಗೆ ಗಮನಹರಿಸುವುದು ಇದು ಸಂಸ್ಕಾರ ಕಾದಂಬರಿಯ ವಸ್ತು ವಿನ್ಯಾಸವಾಗಿದೆ.

ಸಂಸ್ಕಾರ ಕಾದಂಬರಿಯಂತೆ ಬ್ರಾಹ್ಮಣತ್ವ ಹಿನ್ನೆಲೆಯಲ್ಲಿ ಬಂದಂತಹ ಕಾದಂಬರಿಯಾದ ಎಸ್.ಎಲ್.ಭೈರಪ್ಪನವರ **'ವಂಶವೃಕ್ಷ'** ಕಾದಂಬರಿಯು ಬ್ರಾಹ್ಮಣ ಕುಟುಂಬದ ಕಥೆಯನ್ನು ಒಳಗೊಂಡಿದೆ, ಧರ್ಮಿಷ್ಠನೂ, ಪಂಡಿತನೂ ಆದ ಶ್ರೀನಿವಾಸಶ್ರೋತ್ರಿ ಹಾಗೂ ಯೌವ್ವನ ತುಂಬಿದ ಆತನ ಸೊಸೆ ವಿಧವೆ ಕಾತ್ಯಾಯಿನಿಯರ ನಡುವಿನ ಮುಖಾಮಿಖಿ ಕಥೆಯನ್ನು ಒಳಗೊಂಡಿದೆ. ನಂಜನಗೂಡಿನ ಕಪಿಲೆ ನದಿ ಪ್ರವಾಹ ಬಂದು ಅದರಲ್ಲಿ ಶ್ರೀನಿವಾಸಶ್ರೋತ್ರಿಯರವರ ಮಗ ನಂಜುಂಡಶ್ರೋತ್ರಿ ಕಾಲು ಜಾರಿ ನದಿಯಲ್ಲಿ ಮುಳುಗಿ ಸಾಯುವುದರೊಂದಿಗೆ ವಂಶವೃಕ್ಷ ಕಾದಂಬರಿ ಆರಂಭವಾಗುತ್ತದೆ. ವಂಶವೃಕ್ಷದಲ್ಲಿ ಎರಡು ಕುಟುಂಬಗಳ ಕಥೆಯು ಜೊತೆಯಾಗಿ ಸಾಗಿ ಅಲ್ಲಲ್ಲಿ ಸಂಧಿಸುತ್ತ ಮತ್ತೆ ಬೇರೆ ಬೇರೆಯಾಗಿ ಮುಂದುವರಿಯುವ ವಸ್ತು ವಿನ್ಯಾಸವಿದೆ. ವಾಚಕರ ಕುತೂಹಲವನ್ನು ಕೆರಳಿಸಿ ರಹಸ್ಯವನ್ನು ಕಾಪಾಡಿಕೊಳ್ಳುವ ಸಲುವಾಗಿ ಕಾದಂಬರಿಕಾರರು ಈ ತಂತ್ರವನ್ನು ಬಳಸಿಕೊಂಡಿದ್ದಾರೆ. ಕೊನೆಯದಾಗಿ ಎರಡು ಕುಟುಂಬಗಳು ಒಂದಾಗುವ ವೇಳೆಗೆ ಕೃತಿಯು ಮುಕ್ತಾಯವಾಗುತ್ತದೆ.

ಹಿರಿಯರು ಬಾಳಿಬದುಕಿದ್ದ ಮನೆಯಲ್ಲಿ ವಾಸವಾಗಿದ್ದ ಶ್ರೀನಿವಾಸಶ್ರೋತ್ರಿ ಕಪಿಲಾನದಿ ಪ್ರವಾಹದಿಂದ ಮನೆಯಲ್ಲಿ ಹೆಜ್ಜೆ ಮುಳುಗುವಷ್ಟು ನೀರು ಬಂದು ಹಾನಿ ಮಾಡಿದರೂ ನದಿಯನ್ನು ಬೈಯ್ಯದೆ ತಮ್ಮ ಎಂಟು ವರ್ಷದ ಮಗು ನಂಜುಂಡಶ್ರೋತ್ರಿ, ಪತ್ನಿ ಭಾಗೀರತಮ್ಮ ಮನೆಯ ಆಳು ಲಕ್ಷ್ಮಿ ಈ ಮೂವರು ಹೇಳಿದರೂ ಹೊರಡಲಿಲ್ಲ ಪ್ರವಾಹ ಇಳಿಯಿತು. ಕೆಲವು ವರ್ಷಗಳು ಕಳೆದವು ನಂಜುಂಡಶ್ರೋತ್ರಿ ದೊಡ್ಡವನಾಗಿ ಕಾಲೇಜಿಗೂ ಹೋದ. ನಂತರ ಕಾತ್ಯಾಯಿನಿಯೊಂದಿಗೆ ವಿವಾಹವೂ ಆಯಿತು. ಒಂದು ಗಂಡು ಮಗುವೂ ಆಯಿತು ಮಗುವಿಗೆ ಆರು ತಿಂಗಳಿದ್ದಾಗ ಆ ವರ್ಷದ ಜೇಷ್ಠಮಾಸದಲ್ಲಿ ಕಪಿಲೆ ನದಿಯ ಪ್ರವಾಹದ ಸುಳಿಗೆ ಸಿಲುಕಿ ಸತ್ತು ಹೋದನು. ಈಜು ಬರುತ್ತಿದ್ದರೂ ಪ್ರವಾಹದ ಸೆಳೆತದಲ್ಲಿ ಕಾಲು ಜಾರಿತು ದಡದಲ್ಲಿದ್ದವರು ಕೂಗಿಕೊಂಡರು ಒಂದೇ ನಿಮಿಷದಲ್ಲಿ ಸುಳಿಯಲ್ಲಿ ಸಿಕ್ಕಿ ಮುಲುಗಿದನು. ತಿರುಮಲಕೂಡಲು ನರಸಿಂಹಪುರದವರೆಗೂ ಆಳುಗಳು ನದಿಯ ಎರಡು ದಂಡೆಗಳಿಗೂ ಹೋಗಿ ಬಂದರು ಶವ ಸಿಕ್ಕಲಿಲ್ಲ. ಅವನು ಆಹುತಿಯಾದ ನಾಲ್ಕೈದು ದಿನಕ್ಕೆ ಪ್ರವಾಹ ಇಳಿಯಿತು. ನದಿಯ ತೀರದಲ್ಲೇ ಅವನ ಅಪರ ಕರ್ಮಗಳು ನಡೆದವು.

ಇದ್ದ ಒಬ್ಬ ಮಗನನ್ನು ಕಳೆದುಕೊಂಡ ಶ್ರೋತ್ರಿಯವರು, ಭಾಗೀರತಮ್ಮ, ಗಂಡನನ್ನು ಕಳೆದುಕೊಂಡ ಪ್ರೇಮಮಯಿ ಪತ್ನಿ ಕತ್ಯಾಯಿನಿ ಇವರಲ್ಲಿ ದುಃಖ ಹೆಚ್ಚಾಯಿತು. ತಮ್ಮ ಸೊಸೆಯ ಸ್ಥಿತಿಯನ್ನು ನೋಡಿ ಮತ್ತು ಏನೂ ತಿಳಿಯದೆ ನಗುತ್ತಾ ಆಟವಾಡುವ ಒಂದು ವರ್ಷದ ಮೊಮ್ಮಗನನ್ನು ಕಂಡು ಶ್ರೀನಿವಾಸಶ್ರೋತ್ರಿ ದಂಪತಿಗಳಿಗೆ ಕರುಳು ಕಿವುಚಿದಂತಾಯಿತು. ಪರಸ್ಪರ ಸಮಾಧಾನದ ಮಾತುಗಳನ್ನಾಡುತ್ತ ಒಬ್ಬರಿಗೊಬ್ಬರು ಸಮಾಧಾನ ಮಾಡಿಕೊಂಡರು. ಕಾತ್ಯಾಯಿನಿ ಇಂಟರ್‌ಮೀಡಿಯಟ್ ಓದಿ ಪಾಸಾಗಿದ್ದಳು. ಜೀವನದ ಬಗೆಗೆ ಸಾಹಿತಿಗಳು ಪ್ರಬಂಧಕಾರರು ಬರೆದುದನ್ನು ಓದಿದ್ದಳು ಆದರೆ ತನಗೆ ಬಂದ ಈ ಘೋರ ವಿಪತ್ತಿನ ಕಾರಣವನ್ನು ಯಾರಾದರೂ ವಿವರಿಸಬಹುದೆಂದು ಅವಳಿಗೆ ಎನಿಸುತ್ತಿರಲಿಲ್ಲ. ಶ್ರೀನಿವಾಸಶ್ರೋತ್ರಿಯವರು ಮಹಡಿ ಮೇಲಿನ ಕೋಣೆಯ ಗ್ರಂಥಾಲಯದಲ್ಲಿ ಓಲೆಗರಿಗಳು, ಗ್ರಂಥಗಳು, ಕೈಬರಹದ ಪ್ರತಿಗಳು ಇದ್ದವು ಈ ಕೋಣೆಯಲ್ಲಿ ಕುಳಿತು ವೇದಶಾಸ್ತ್ರ, ಪುರಾಣ, ಧರ್ಮಶಾಸ್ತ್ರ, ಆಯುರ್ವೇದಗಳ ಅಧ್ಯಯನ ಮಾಡುತ್ತಿದ್ದರು. ಕಾತ್ಯಾಯಿನಿಗೆ ಗಂಡ ಸತ್ತ ಮೇಲೆ ಯಾರೊಂದಿಗೂ ಹೆಚ್ಚಿಗೆ ಮಾತನಾಡುತ್ತಿರಲಿಲ್ಲ. ಶ್ರೋತ್ರಿಯವರು ಮಗು ನಾನು ಹೇಳಿದ ಹಾಗೆ ಭಗವದ್ಗೀತೆ ಓದು ಎಂದು ಕೇಳಿದರು. ಮಗುವಿನ ಮೂಲಕ ಶ್ರೋತ್ರಿಯವರ ಮನೆಯವರು ತಮ್ಮೆಲ್ಲ ದುಃಖವನ್ನು ಮರೆತಿದ್ದರು. ಒಂದು ದಿನ ಸಂಜೆ ದೇವಾರ್ಚನೆಯನ್ನು ಮುಗಿಸಿ ದೇವರ ಮನೆಯಿಂದ ಹೊರಗೆ ಬರುವ ಹೊತ್ತಿಗೆ ಮೈಸೂರಿನಿಂದ ಬಂದಿದ್ದ ಡಾ॥ ಸದಾಶಿವರಾಯರು ಒಂದು ದಿವಾನ್‌ಖಾನೇಲಿ ಕೂತಿದ್ದರು. ಪರಸ್ಪರ ಭೇಟಿಯಾದ ನಂತರ **"ಪ್ರಾಚೀನ ಭಾರತೀಯ ರಾಜ್ಯಶಾಸ್ತ್ರಕ್ಕೆ ಧರ್ಮದ ಆಧಾರ"** ಎಂಬ ಹೆಸರಿನ ಕೃತಿಯನ್ನ ಕೊಟ್ಟರು. ಡಾ॥ ಸದಾಶಿವರಾಯರು ಶ್ರೀನಿವಾಸಶ್ರೋತ್ರಿ ಅವರ ಸತ್ತುಹೋದ ಮಗನ ಗುರುಗಳು. ಇವರಿಗೆ ನಂಜುಂಡಶ್ರೋತ್ರಿ ಸತ್ತಿರುವ ವಿಷಯ ಗೊತ್ತಿರುವುದಿಲ್ಲ ನಂಜುಂಡಶ್ರೋತ್ರಿ ಎಲ್ಲಿ ಎಂದು ಕೇಳಿದಾಗ ಕಪಿಲೆ ಬಲಿ ತೆಗೆದುಕೊಂಡಳು ಕಾಲು ಜಾರಿ ಬಿದ್ದುಬಿಟ್ಟ

ಮತ್ತೆ ದಡ ಸೇರಲಿಲ್ಲ ಎಂದರು. ಈ ಮಾತಿನಿಂದ ರಾಯರಿಗೆ ಆಘಾತವಾಯಿತು. ಶ್ರೋತ್ರಿಯವರಿಗೆ ಸಮಾಧಾನ ಮಾಡಿದರು ಅವರ ವ್ಯಕ್ತಿತ್ವದ ಬಗ್ಗೆ ಅಪಾರ ವಿಶ್ವಾಸ ಗೌರವಗಳಿದ್ದವು. ಆದರೆ ಇದ್ದ ಒಬ್ಬ ಮಗನು ಸತ್ತ ಸಂದರ್ಭದಲ್ಲಿ ತನ್ನ ವೈಯಕ್ತಿಕ ದುಃಖವನ್ನು ನುಂಗಿಕೊಂಡು ಇವರು ಇಷ್ಟ ಶಾಂತರಾಗಿರಬಲ್ಲರೆಂದು ರಾಯರು ಕಲ್ಪಿಸಿಕೊಂಡಿರಲಿಲ್ಲ. ರಾಯರು ಶ್ರೋತ್ರಿಯವರಿಗೆ ನನ್ನ ಈ ಗ್ರಂಥ ತುಂಬಾ ಯಶಸ್ಸು ತಂದಿತು. ಇದನ್ನು ಮೆಚ್ಚಿಕೊಂಡು ಯುರೋಪ್ ದೇಶದಿಂದ ಅನೇಕ ವಿಶ್ವಾಂಸರು ಕಾಗದ ಬರೆದಿದ್ದಾರೆ. ಈ ಗ್ರಂಥದಿಂದ ನನಗೆ ತೃಪ್ತಿಯಿಲ್ಲ. "ಪ್ರಾಚೀನ ಭಾರತೀಯ ರಾಜ್ಯಶಾಸ್ತ್ರಕ್ಕೆ ಧರ್ಮದ ಆಧಾರ" ಎಂಬ ವಿಷಯ ಕುರಿತು ಸಂಶೋಧನೆ ಮಾಡುತ್ತಿರುವಾಗ ಪ್ರಾಚೀನ ಭಾರತದ ಇಡೀ ಜನಜೀವನಕ್ಕೆ ಧರ್ಮದ ಆಧಾರವಿದ್ದ ಅಂಶವನ್ನು ಮನಗಂಡೆ. ಈ ದೇಶದ ಸಾಂಸ್ಕೃತಿಕ ಪರಂಪರೆಯನ್ನು ಇತಿಹಾಸಕಾರರು ತಿಳಿಯಬಹುದಾದ ಕಾಲದಿಂದ ಈ ದಿನದವರೆಗೆ ವರ್ಣಿಸಬೇಕೆಂಬ ಆಕಾಂಕ್ಷೆ ಮನದಲ್ಲಿ ಹುಟ್ಟಿದೆ. ಸುಮಾರು ಐದು ಸಂಪುಟಗಳಲ್ಲಿ ಪ್ರಕಟಿಸಬಹುದಾದ ಇದನ್ನು ಇಪ್ಪತ್ತೈದು ವರ್ಷಗಳಲ್ಲಿ ಬರೆದು ಮುಗಿಸಬಲ್ಲೆ ಎಂಬ ನಂಬಿಕೆ ನನಗಿದೆ. ಈಗ ಮುಗಿಸಿದ ಗ್ರಂಥದಲ್ಲಿ ದೊರೆತ ಹಾಗೆಯೇ ಈ ಪುಸ್ತಕಕ್ಕೂ ನಿಮ್ಮ ಸಹಾಯ ಮತ್ತು ಆಶೀರ್ವಾದಗಳು ಬೇಕು ಎಂದರು. ರಾಯರಿಗೆ ಶ್ರೋತ್ರಿಯವರು ಹಣದ ಸಹಾಯ ಮತ್ತು ಆಶೀರ್ವಾದವನ್ನು ಮಾಡಿದರು.

ಡಾ॥ ಸದಾಶಿವರಾಯರು ಅಧ್ಯಯನ ಮುಗಿಸಿ ಹೊರಬಂದಾಗ ಹೆಂಡತಿ ನಾಗಲಕ್ಷ್ಮಿ ಗಂಡನಿಗೆ ಎಣ್ಣೆ ಸ್ನಾನ ಮಾಡಿಸಿದಳು. ಇವರ ಮಗ ಪೃಥ್ವಿ, ಇವರ ತಮ್ಮ ರಾಜರಾಯ. ನಾಗಲಕ್ಷ್ಮಿಯು ರಾಜರಾಯನಿಗಿಂತ ಎರಡು ತಿಂಗಳು ಚಿಕ್ಕವಳು. ನಾಗಲಕ್ಷ್ಮಿ ಸದಾಶಿವರಾಯರ ಸೋದರ ಮಾವನ ಮಗಳು ತನಗಿಂತ ಹತ್ತು ವರ್ಷ ಚಿಕ್ಕವಳಾದರು ವಿವಾಹವಾದರು. ಮಿಡಲ್‌ಸ್ಕೂಲ್ ದಾಟುವಷ್ಟು ವಿದ್ಯೆ ಪಡೆದಿದ್ದಳು. ಮೊದಲಿನಿಂದ ವ್ಯಾಸಂಗ ಪ್ರಿಯರಾದ ರಾಯರು ಮದುವೆ ಬಗ್ಗೆಯಾಗಲೀ ತಾವು ಮದುವೆಯಾಗುವ ಕನ್ಯೆಯ ಬಗ್ಗೆಯಾಗಲೀ ಯೋಚಿಸಿದವರೇ ಅಲ್ಲ. ಹಿರಿಯರು ನಿಶ್ಚೈಯಿಸಿದಂತೆ ಇವರಿಬ್ಬರ ಮದುವೆ ನಡೆದು ಹೋಯಿತು. ಮದುವೆಯಾದ ಮೇಲೂ ರಾಯರ ಓದು ಬರಹ ಕಡಿಮೆ ಮಾಡಲಿಲ್ಲ. ಇತ್ತೀಚ್ಚೆಗೆ ಗಂಭೀರವಾದ ಸಂಶೋಧನ ಗ್ರಂಥ ರಚನೆಯಲ್ಲಿ ನಿರತರಾಗಿದ್ದರು. ಸಂಸಾರವನ್ನು ಅಗತ್ಯಕ್ಕಿಂತ ಹೆಚ್ಚು ಹಚ್ಚಿಕೊಂಡವರಲ್ಲ ನಾಗಲಕ್ಷ್ಮಿಯೇ ತನ್ನ ಪತಿಯ ಬೇಕು ಬೇಡಗಳನ್ನು ಅರ್ಥಮಾಡಿಕೊಂಡು ಕಾಲಕಾಲಕ್ಕೆ ಊಟ ಉಪಚಾರಗಳನ್ನು ಅತ್ಯಂತ ಶ್ರದ್ಧಾಭಕ್ತಿಯಿಂದ ನಡೆಸಿಕೊಂಡು ಬರುತ್ತಿದ್ದಳು. ಸದಾಶಿವರಾಯರ ತಮ್ಮ ರಾಜರಾಯನು ಇಂಗ್ಲೀಷ್ ಸಾಹಿತ್ಯದಲ್ಲಿ ಎಂ.ಎ ಪಾಸು ಮಾಡಿದನು. ವಿದ್ಯಾರ್ಥಿವೇತನ ಪಡೆದು ಇಂಗ್ಲೆಂಡಿಗೆ ಹೋಗಿ ಆಕ್ಸ್‌ಫರ್ಡ್ ವಿಶ್ವವಿದ್ಯಾನಿಲಯದಿಂದ ವ್ಯಾಸಂಗ ಮುಗಿಸಿ ಬಂದು ಮೈಸೂರು ಮಹಾರಾಜ ಕಾಲೇಜಿನಲ್ಲಿ ಅಧ್ಯಾಪಕನಾಗಿದ್ದನು. ಈತ ನಾಟಕಗಳ ಕಡೆಗೆ ಹೆಚ್ಚಿನ ಆಸಕ್ತಿ ಹೊಂದಿದ್ದನು. ಸಮಯ ಸಿಕ್ಕಗೆಲ್ಲ ಇಂಗ್ಲೀಷ್ ನಾಟಕಗಳನ್ನು, ನೃತ್ಯಕೂಟಗಳನ್ನು ನೋಡುತ್ತಿದ್ದನು. ಪೃಥ್ವಿಯ ಜೊತೆಗೆ ತುಂಬಾ ಹೊಂದಿಕೊಂಡಿದ್ದನು.

ಇತ್ತ ಶ್ರೋತ್ರಿಯವರ ಮನೆಯಲ್ಲಿ ಬಹಳ ವಾತ್ಸಲ್ಯ ಪ್ರೀತಿಯಿಂದ ಕಾಣುವ ಅತ್ತೆ-ಮಾವಂದಿರು, ಮುದ್ದಾದ ಮಗ ಮತ್ತು ಇನ್ನಿತರ ಸೌಕರ್ಯಗಳನ್ನು ಹೊಂದಿದ್ದರೂ ಕಾತ್ಯಾಯಿನಿಗೆ ಜೀವನವು ಬೇಸರವೆನಿಸುತ್ತಿತ್ತು. ಮಗು ಸ್ವಲ್ಪ ದೊಡ್ಡವನಾಗಿ ಬೆಳೆದಂತೆ ತಾಯಿಯನ್ನು ಅವಲಂಬಿಸುವುದನ್ನು ಕಡಿಮೆ ಮಾಡಿದ ಮೇಲೆ ಕಾತ್ಯಾಯಿನಿಯ ಬೇಸರ ಹೆಚ್ಚಾಯಿತು. ನಂಜನಗೂಡಿನಿಂದ ಎಷ್ಟೋ ಹುಡುಗಿಯರು ಪ್ರತಿದಿನವೂ ರೈಲಿನಲ್ಲಿ ಮೈಸೂರಿಗೆ ಹೋಗಿ ಓದುತ್ತಿದ್ದಾರೆ. ತಾನೂ ಏಕೆ ಕಾಲೇಜಿಗೆ ಹೋಗಬಾರದು. ಬಿ.ಎ ಮಾಡಬಾರದು? ಎಂಬ ಆಲೋಚನೆ ಮತ್ತೆ ಮತ್ತೆ ಕಾತ್ಯಾಯಿನಿಯ ಮನಸ್ಸಿನಲ್ಲಿ ಸುಳಿಯುತ್ತಿತ್ತು. ಕಾರಣ ಪತಿ ನಂಜುಂಡಶ್ರೋತ್ರಿ ಬಿ.ಎ ಪರೀಕ್ಷೆ ಮುಗಿಸುವ ಹೊತ್ತಿಗೆ ಮರಣ ಹೊಂದಿದ. ತಂದೆ-ತಾಯಿಯರ ಆಸೆಯನ್ನು ಸೊಸೆಯಾಗಿ ನಾನು ಪೂರೈಸಿ ಅವರಿಗೆ ಸಂತೋಷ ಉಂಟು ಮಾಡಬೇಕೆಂದು ಭಾವಿಸಿದಳು. ಈ ಆಸೆಗೆ ಅತ್ತೆಮಾವರ ಒಪ್ಪಿಗೆ ಸಿಗುವುದೋ ಇಲ್ಲವೋ ಎಂಬ ಸಂಶಯವಿದ್ದರೂ ಕೇಳುವುದರಲ್ಲಿ ತಪ್ಪಿಲ್ಲ ಎಂದು ಯೋಚಿಸಿ. ಒಂದು ದಿನ ಮಾವನನೊಡನೆ ವಿಷಯವನ್ನು ಪ್ರಸ್ತಾಪಿಸಿದಳು.

ಮಾವ ಮಗೂ ನೀನು ದಿನ ಸಕಾಲದಲ್ಲಿ ಊಟತಿಂಡಿಗಳಿಲ್ಲದೆ ರೈಲಿನಲ್ಲಿ ಹೋಗಿ ಓದುವ ಪ್ರಮೇಯವೇನು? ಸುಖವಾಗಿ ಮನೇಲಿರು" ಎಂದು ಹೇಳಿದರು. ಅಷ್ಟಕ್ಕೆ ಸುಮ್ಮನಿರದೆ ತಾನು ಓದಿ ಬಿ.ಎ ಪಾಸು ಮಾಡಿದರೆ ತನ್ನ ಗಂಡನ ಅಪೂರ್ಣ ಆಸೆಯನ್ನು ಪೂರ್ಣಗೊಳಿಸಿದಂತಾಗುತ್ತದೆ ಎಂದಳು. ಬಿ.ಎ ಅಂತಹ ಲೌಕಿಕ ವಿದ್ಯೆಗೆ ಬದಲಾಗಿ ಧಾರ್ಮಿಕ ವಿದ್ಯೆಯನ್ನು ಅಭ್ಯಾಸ ಮಾಡುವುದು ಒಳ್ಳೆಯದು. ನೀನು ಭಗವದ್ಗೀತೆ ಓದು. ಕಾಲೇಜಿನಲ್ಲಿ ಓದುವುದಕ್ಕಿಂತ ಭಗವದ್ಗೀತೆ ಓದಿದರೆ ಮನಸ್ಸಿಗೆ ಶಾಂತಿ, ನೆಮ್ಮದಿ ಸಿಗುತ್ತೆ. ಉಪನಿಷತ್ತುಗಳನ್ನು ಓದು. "ನನ್ನ ಕೇಳಿದರೆ 'ನಿನ್ನಂಥೋರಿಗೆ ಕಾಲೇಜು ಓದಿಗಿಂತ, ಭಗವದ್ಗೀತೆ, ಉಪನಿಷತ್ತುಗಳ ಅಭ್ಯಾಸ ಹೆಚ್ಚು ಒಳ್ಳೆಯದು. ಎಂದರು ನಿನ್ನಂಥವರು ಎನ್ನುವ ಮಾತಿನ ಹಿಂದೆ ಒಂದು ವಿಶೇಷವಾದ ಅರ್ಥವಿತ್ತು. ಇದರಿಂದ ಕಾತ್ಯಾಯಿನಿಯ ಮನಸ್ಸು ಕಲಕಿತು. ಮತ್ತೊಂದು ಮದ್ಯಾಹ್ನ ಶ್ರೋತ್ರಿಯವರು ಭಾಗೀರತಮ್ಮ, ಲಕ್ಷ್ಮಿಯವರ ಜೊತೆ ಸೊಸೆಯ ಓದಿನ ವಿಷಯವನ್ನು ಚರ್ಚಿಸುತ್ತಿದ್ದರು. ಭಾಗೀರತಮ್ಮ ಇಷ್ಟೆಲ್ಲಾ ಆದ ಮೇಲೆ ಇನ್ನೆಂಥ ಕಾಲೇಜು ಎಂದಾಗ ಶ್ರೋತ್ರಿಯವರೆ ಇನ್ನೂ ಚಿಕ್ಕವಯಸ್ಸು ಮನೇಲಿ ಕೂತು ಮಾಡುವುದೇನು. ಒಂದೆರಡು ವರ್ಷ ಹೋಗಿ ಬರಲಿ ಬಿಡು ಎಂದರು. ಇದಕ್ಕೆ ಲಕ್ಷ್ಮಿ ಮಧ್ಯೆ ಬಾಯಿ ಹಾಕಿ ಕಾತ್ಯಾಮ್ಮ ಕಾಲೇಜಿಗೆ ಹೋಗ್ತಿನಿ ಅನ್ನುತ್ತಿರುವುದು ಅವಳ ಗಂಡ ಮಧ್ಯದಲ್ಲಿ ಬಿಟ್ಟ ಓದನ್ನು ಪೂರ್ತಿ ಮಾಡ್ತಿನಿ ಅನ್ನೋಕೆ ಅಲ್ವಾ ಓದಲಿ ಬಿಡಮ್ಮ ಎಂದಳೂ. ಅತ್ತೇ ಭಾಗಿರತಮ್ಮ ಅಸಮಾಧನದಿಂದ ಸಮ್ಮತಿ ಸೂಚಿಸಿದಳು.

ಕಾತ್ಯಾಯಿನಿಯು ಕಾಲೇಜು ಪ್ರವೇಶಕ್ಕೆ ಅರ್ಜಿಹಾಕಲು ಬಂದಾಗಲೇ ಸದಾಶಿವರಾಯರ ತಮ್ಮ ರಾಜರಾಯರ ಮೊದಲ ಪರಿಚಯವಾಗುತ್ತದೆ. ಅಣ್ಣನ ಒತ್ತಾಯದಿಂದ ರಾಜಾರಾಯನೇ ಕಾತ್ಯಾಯಿನಿಯನ್ನು ಮನೆಗೆ ಕರೆದುಕೊಂಡುಹೋಗಿ ಅತ್ತಿಗೆ ನಾಗಲಕ್ಷ್ಮಿಯ ಪರಿಚಯ ಮಾಡಿಕೊಟ್ಟಿದ್ದ. ಅಲ್ಲಿಯೇ ಊಟ ಮಾಡಿದ ಮೇಲೆ ರಾಜರಾಯನೆ ಅವಳನ್ನು ಪುನಃ ರೈಲ್ವೆಸ್ಟೇಷನ್‌ಗೆ ಕರೆದುಕೊಂಡು

ಬಂದು ಬಿಟ್ಟಿದ್ದ. ರಾಜರಾಯನೇ ಕಾಲೇಜಿನಲ್ಲಿ ಕಾತ್ಯಾಯಿನಿಯ ತರಗತಿ ಸಾಮಾನ್ಯ ಇಂಗ್ಲೀಷ್, ಮತ್ತು ಐಚ್ಛಿಕ ಇಂಗ್ಲೀಷ್ ಎರಡು ಪತ್ರಿಕೆಗಳನ್ನು ಪಾಠ ಮಾಡುತ್ತಿದ್ದ. ನಾಟಕ ರಂಗದ ಪರಿಚಯವಿದ್ದರಿಂದ ವಿದ್ಯಾರ್ಥಿಗಳಿಗೆ ಪಾಠಮಾಡುವಾಗ ತಮ್ಮ ಕಣ್ಣಮುಂದೆ ನಾಟಕ ನೋಡುತ್ತಿರುವಂತೆ ಅನುಭವವಾಗುವಂತೆ ಪಾಠ ಮಾಡುತ್ತಿದ್ದ. ಇಡೀ ತರಗತಿಯೇ ರಾಜಾರಾಯರ ಪಾಠಕ್ಕೆ ಮಂತ್ರ ಮುಗ್ಧರಾಗಿ ಕುಳಿತು ಆಶ್ವಾದಿಸುತ್ತಿತ್ತು. ಕಾತ್ಯಾಯಿನಿಯು ಇದಕ್ಕೆ ಹೊರತಾಗಿರಲಿಲ್ಲ. ತಮ್ಮ ಮನೆಗೆ ಬಂದು ಹೋಗುತ್ತಿದ್ದ ಕಾತ್ಯಾಯಿನಿಯ ಬಗೆಗೆ ರಾಜರಾಯನಿಗೆ ಒಂದು ರೀತಿಯ ಅವ್ಯಕ್ತ ಆಸಕ್ತಿ ಮೂಡಿತ್ತು, ಅವಳಲ್ಲಿದ್ದ ಪ್ರೌಢತೆ, ತೇಜಸ್ಸು, ಗಾಂಭೀರ್ಯಗಳನ್ನು ಅವನು ತುಂಬ ಮೆಚ್ಚಿಕೊಂಡಿದ್ದ.

ಡಾ॥ ಸದಾಶಿವರಾಯರು ಭಾರತದ ಐತಿಹಾಸಿಕ ಸ್ಥಳಗಳ ಅಧ್ಯಯನಕ್ಕಾಗಿ ಒಂದು ತಿಂಗಳು ಪ್ರವಾಸಕ್ಕೆ ಹೊರಟು ಎಲ್ಲೋರದಿಂದ ಅಜಂತಿಗೆ ಬಂದು ಅಲ್ಲಿನ ಗುಹಾಂತರ ದೇವಾಲಯಗಳ ರಚನೆ ಮತ್ತು ಚಿತ್ರಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿ ಟಿಪ್ಪಣಿ ಮಾಡಿಕೊಳ್ಳುತ್ತಿರುವಾಗ ಅವನಿಗೆ ಸಿಂಹಳದಿಂದ ಬಂದಿದ್ದ ಬೌದ್ಧ ಧರ್ಮೀಯರಾದ ಜಯರತ್ನೆ ದಂಪತಿಗಳು ಮತ್ತು ಅವರ ಮಗಳು ಕರಣಾರತ್ನೆ ಪರಿಚಯವಾಗುತ್ತದೆ. ಕರುಣಾರತ್ನೆ ಕೂಡ ಇತಿಹಾಸದಲ್ಲಿ ಉನ್ನತವ್ಯಾಸಂಗ ಮಾಡುತ್ತಿದ್ದು ಸಂಶೋಧನೆಯಲ್ಲಿ ವಿಶೇಷ ಆಸಕ್ತಿ ತಾಳಿದ್ದವಳು. ಇಲ್ಲಿ ಇವರಿಬ್ಬರ ಪರಸ್ಪರ ಪರಿಚಯವಾದ ಮೇಲೆ ತಂದೆ–ತಾಯಿ ಊರಿಗೆ ಹೋದಮೇಲೆಯೂ ಕರುಣರತ್ನ ಎರಡುದಿನ ಅಲ್ಲಿಯೇ ಉಳಿದು ರಾಯರು ಹೇಳಿದಂತೆ ಶೀಘ್ರಲಿಪಿಯಲ್ಲಿ ಟಿಪ್ಪಣಿಮಾಡಿಕೊಂಡು ರಾಯರಿಗೆ ಸಹಾಯ ಮಾಡಿದಳು. ಡಾ॥ ಸದಾಶಿವರಾಯರ ವಿದ್ವತ್ತಿನಿಂದ ಪ್ರಭಾವಿತಳಾದ ಕರುಣರತ್ನೆಯು ಮುಂದೆ ಸಿಂಹಳದಿಂದ ಮೈಸೂರು ವಿಶ್ವವಿದ್ಯಾನಿಲಯ್ಯಕೆ ಸಂಶೋದನಾ ವಿದ್ಯಾರ್ಥಿಯಾಗಿ ಬಂದಳು. "ಬೌದ್ಧಧರ್ಮದ ಹಿನ್ನೆಲೆಯಲ್ಲಿ ಸಿಂಹಳದ ಸಂಸ್ಕೃತಿ" ಎಂಬ ವಿಷಯದ ಮೇಲೆ ಸಂಶೋಧನೆ ನಡೆಸಿ ಪಿ.ಹೆಚ್.ಡಿ ಪದವಿಗಾಗಿ ಮಹಾಪ್ರಬಂಧಕ್ಕೆ ಸದಾಶಿವರಾಯರೇ ಮಾರ್ಗದರ್ಶಕರಾದರು. ಇದರ ಜೊತೆಗೆ ಕರುಣಾರತ್ನೆ ತನ್ನ ಸಂಶೋಧನೆಯ ಜೊತೆಗೆ ರಾಯರು ಸಿದ್ದಪಡಿಸುತ್ತಿದ್ದ, ಭಾರತದ ಸಾಂಸ್ಕೃತಿಕ ಪರಂಪರೆಯನ್ನ ಕುರಿತು ಐದು ಸಂಪುಟಗಳ ಮಹಾನ್ ಗ್ರಂಥ ರಚನೆಯಲ್ಲಿ ರಾಯರ ಜೊತೆಜೊತೆಗೆ ಕೆಲಸ ಮಾಡಿದಳು.

ಕರುಣಾರತ್ನೆ ಹೊರ ದೇಶದಿಂದ ಬಂದ ಸಂಶೋಧನಾ ವಿದ್ಯಾರ್ಥಿನಿ ಎಂಬುದರ ಜೊತೆಗೆ ಸದಾಶಿವರಾಯರ ಶಿಫಾರಸ್ಸಿನ ಮೇರೆಗೆ ಮಹಿಳಾ ಹಾಸ್ಟಲ್‌ನಲ್ಲಿ ಒಂದು ಪ್ರತ್ಯೇಕ ಕೋಣೆ ದೊರೆಯಿತು. ಕ್ರಮೇಣ ಡಾ॥ ಸದಾಶಿವರಾಯರು ಮತ್ತು ಕರುಣಾರತ್ನೆಯರು ಗುರು–ಶಿಷ್ಯೆಯರ ಸಂಬಂಧದಿಂದ ಮುಂದೆ ಬಹುದೂರ ಸಾಗಿ ಇಬ್ಬರೂ ರಿಜಿಸ್ಟರ್ ಮದುವೆಯಾದರು. ಕರುಣಾಳನ್ನು ಮದುವೆಯಾದ ಮೇಲೆಯೂ ರಾಯರು ತಮ್ಮ ಧರ್ಮಪತ್ನಿಯಾದ ನಾಗಲಕ್ಷ್ಮಿಯನ್ನು ಅಲಕ್ಷಿಸಿರಲಿಲ್ಲ.

ಇತ್ತ ಕಾತ್ಯಾಯಿನಿ ಕಾಲೇಜಿನ ರಜಾದಿನಗಳ ಕಾಲದಲ್ಲಿ ಒಂದು ದಿನ ಮನೆಯ ಹಿಂದಿನ ತೋಟದ ಹೂವಿನ ಗಿಡಗಳಿಗೆ ನೀರು ಹಾಕಲು ಹೋಗುತ್ತಿದ್ದಳು ಅಲ್ಲಿ ಮಲ್ಲಿಗೆ ಬಳ್ಳಿಯನ್ನು ಹಬ್ಬಿಸಿದ ಒಂದು ಕೊಂಡಮಾವಿನ ಮರವು ಒಳಗಿನಿಂದ ಒಣಗಿ ಹೋಗಿರುವುದನ್ನು ಗಮನಿಸಿದಳು. ಈ

ಸಂಗತಿಯನ್ನು ಮಾವನವರಿಗೆ ತಿಳಿಸಿದಾಗ ಅವರು ಆಳುಗಳಿಂದ ಅದರ ಹತ್ತಿರವೇ ಮತ್ತೊಂದು ಕೊಂಡಮಾವಿನ ಕೊನೆಯನ್ನು ನೆಟ್ಟಿ ದಿನವೂ ಅದಕ್ಕೆ ನೀರು ಹಾಕುವಂತೆ ಕಾತ್ಯಾಯಿನಿಗೆ ಹೇಳಿದರು. ಹದಿನೈದು ದಿನಗಳಲ್ಲಿ ಹೊಸಕೊಂಡ ಮಾವಿನ ಕೊಂಬೆಯು ಚಿಗುರಿದ ಮೇಲೆ ಅದಕ್ಕೆ ಹಬ್ಬಿಕೊಂಡ ಮಲ್ಲಿಗೆ ಬಳ್ಳಿಯು ಮೊದಲಿನಂತೆ ರಾಶಿರಾಶಿ ಹೂಬಿಡಲು, ಪ್ರಾರಂಭಿಸಿತು. ಕಾದಂಬರಿ ಕಾರರು ಇಲ್ಲಿ ಕಾತ್ಯಾಯಿನಿಯ ಮನಸ್ಸಿನಲ್ಲಿ ಆಗುತ್ತಿರುವ ಬದಲಾವಣೆಯನ್ನು ಸೂಕ್ಷ್ಮವಾಗಿ ಸಾಂಕೇತಿಕವಾಗಿ ಬಳಸಿಕೊಂಡಿರುವ ತಂತ್ರವನ್ನು ಕಾಣಬಹುದು. ಇದು ಮುಂದೆ ಕಾತ್ಯಾಯಿನಿ ಮತ್ತು ರಾಜಾರಾಯರ ಸಂಬಂಧದ ಹಾಗೂ ಮದುವೆಯನ್ನು ಸಂಕೇತಿಕವಾಗಿ ತರುವ ತಂತ್ರವನ್ನು ಕಾಣಬಹುದಾಗಿದೆ. ಇದಲ್ಲದೆ ರಾಜಾರಾಯ ರೈತರು ಹೊಲಗಳನ್ನು ಬಿತ್ತಿದ ಮೇಲೆ ಹದಿನೈದು ದಿನಕ್ಕೆ ಬೀಜಗಳು ಮೊಳಕೆಯೊಡೆದು ಸಸಿಗಳು ಹಸಿರಿನಿಂದ ನಳನಳಿಸಿದವು ಪ್ರಕೃತಿಯ ಈ ತತ್ವವನ್ನು ಕಂಡ ರಾಜಾರಾಯರು ಇಂಗ್ಲೀಷಿನಲ್ಲಿ ಪ್ರಿಮಾರ್ಡಿಯಲ್ (Primordial – ಮೂಲತತ್ವ) ಎಂಬ ನಾಟಕವನ್ನು ಮಾನವನ ಜೀವನಕ್ಕೆ ಅನ್ವಯಿಸುವಂತೆ ಬರೆದರು. ಈ ನಾಟಕವನ್ನು ಕಾಲೇಜಿನಲ್ಲಿ ಪ್ರದರ್ಶಿಸಲು ನಾಯಕ ನಾಯಕಿಯರ ಪಾತ್ರಗಳಲ್ಲಿ ರಾಜಾರಾಯ ಮತ್ತು ಕಾತ್ಯಾಯಿನಿ ಅಭಿನಯಿಸಿದರು. ಹೀಗೆ ನಾಟಕದಲ್ಲಿ ಪ್ರಕೃತಿ – ಪುರುಷರಾಗಿ ಅಭಿನಯಿಸುವ ಮೂಲಕ ಪರಸ್ಪರ ಒಬ್ಬರನ್ನೊಬ್ಬರು ಅರ್ಥೈಸಿಕೊಂಡು ಹತ್ತಿರವಾದರು. ಇಲ್ಲೂ ಕೂಡ ಕಾದಂಬರಿಕಾರರು ಕಾತ್ಯಾಯಿನಿ ಮತ್ತು ರಾಜರ ನಡುವಿನ ಸಂಬಂಧವು ವೈವಾಹಿಕ ಜೀವನಕ್ಕೆ ಹತ್ತಿರವಾಗುತ್ತಿರುವ ಸಂದರ್ಭವನ್ನು ಪ್ರಕೃತಿ – ಪುರುಷ ಸಂಕೇತದ ಮೂಲಕ ಅರ್ಥೈಸುವ ಪ್ರಯತ್ನ ಮಾಡಿದ್ದಾರೆ. ನವರಾತ್ರಿಯ ರಜಾಕಾಲದಲ್ಲಿ ಒಂದು ದಿನ ರಾಜಾರಾಯ ಕಾತ್ಯಾಯಿನಿಯರು ರೈಲಿನಲ್ಲಿ ಬೃಂದಾವನಕ್ಕೆ ಬಂದು ಸಂಜೆಯವರೆಗೆ ಸುತ್ತಾಡಿ ಬಂದರು. ಪರಸ್ಪರರಲ್ಲಿ ಸ್ನೇಹವು ಬೆಳೆಯಿತು. ತಾವಿಬ್ಬರು ಮದುವೆಯಾಗುವ ನಿರ್ಧಾರಕ್ಕೆ ಬಂದರು.

ರಾಜಾರಾಯ ತನ್ನ ಅತ್ತಿಗೆ ಹತ್ತಿರ ಕಾತ್ಯಾಯಿನಿಯನ್ನು ಮದುವೆ ಆಗುವ ವಿಚಾರವನ್ನು ಹೇಳಿ ಒಪ್ಪಿಗೆ ಪಡೆದಷ್ಟು ಸುಲಭವಾಗಿ ಕಾತ್ಯಾಯಿನಿ ಅತ್ತೆ–ಮಾವರಿಂದ ಒಪ್ಪಿಗೆ ಪಡೆಯುವುದು ಸಾಧ್ಯವಾಗಲಿಲ್ಲ. ಕಾತ್ಯಾಯಿನಿಯ ಮನಸ್ಸಿನಲ್ಲಿ ಒಂದಿಷ್ಟು ತೊಳಲಾಟಗಳು ಶುರುವಾದವು. ಮದುವೆಯ ವಿಷಯವನ್ನೆ ಮಾವನವರ ಎದುರಿಗೆ ಕೇಳುವಷ್ಟು ಧೈರ್ಯ ಬರದೆ ಒಂದು ರಾತ್ರಿ ಅಂತರಂಗದ ದ್ವಂದ್ವವನ್ನು ಕುರಿತು ಸುದೀರ್ಘವಾಗಿ ಯೋಚಿಸಿ ನಿರ್ಧಾರಕ್ಕೆ ಬಂದು ಪತ್ರ ಬರೆದಳು. 1"ಸಮಾಜದ ಕುರುಡು ತೆರೆಯನ್ನು, ನಂಬಿಕೆಗಳನ್ನ ಸರಿಸಿ ಮಾನವೀಯ ಅಂತಃಕರಣದ ದೃಷ್ಟಿಯಿಂದ ಇದನ್ನು ನೋಡಬೇಕು. ನಾನು ನಿಮ್ಮಮಗಳೆ ಎಂದು ಭಾವಿಸಿ ಈ ಮದುವೆಗೆ ಅಪ್ಪಣೆ ಕೊಡಬೇಕೆಂದು ಪ್ರಾರ್ಥಿಸಿದ್ದಳು"1. ಬೆಳಿಗ್ಗೆ ಮಾವನ ಕೈಗೆ ಆ ಪತ್ರವನ್ನು ನೀಡಿ ಕಾಲೇಜಿಗೆ ಹೋದಳು. ಸಂಜೆ ಕಾತರ ಒತ್ತಡ ದುಗುಡದಿಂದ ಬಂದು ರಾತ್ರಿ ಊಟವಾದ ಮೇಲೆ ಮಾವನ ಕೋಣೆಗೆ ಹೋಗಿ ಕೇಳಿದಳು. 2"ನನ್ನ ಕಾಗದ ಓದಿದಿರಾ? ನನಗೆ ಅಪ್ಪಣೆ ಕೊಡಬೇಕು"2 ಎಂದು ಕೇಳಿದಳು. ಶ್ರೀನಿವಾಸಶ್ರೋತಿಯವರು ಮೌನರಾಗಿ ಯೋಚಿಸಿ

1. ವಂಶವೃಕ್ಷ –ಎಸ್.ಎಲ್.ಭೈರಪ್ಪ, ಪುಟ–141, 2004
2. ವಂಶವೃಕ್ಷ –ಎಸ್.ಎಲ್.ಭೈರಪ್ಪ, ಪುಟ–143, 2004

ಅನಂತರ ಶಾಂತ ಧ್ವನಿಯಲ್ಲಿ 3"ನನ್ನ ಅಪ್ಪಣೆ ಪಡೆಯುವ ಪ್ರಶ್ನೆ ಇಲ್ಲಿ ಬರುವುದಿಲ್ಲ". ನಿನಗೆ ತಿಳಿದ ಹಾಗೆ ಮಾಡುವ ಸ್ವಾತಂತ್ರ್ಯವಿದೆ3 ಎಂದು ಹೇಳಿದರು. ನೀವು ಮನೆಯ ಯಜಮಾನರು ನಿಮ್ಮ ಅನುಮತಿ ಇಲ್ಲದೆ ನಾನು ಏನೂ ಮಾಡಲಾರೆ ಎಂದಾಗ 'ನಾನು ಮನೆಯ ಯಜಮಾನ ಅಂತ ಈಗಲೂ ನೀನು ಒಪ್ಪಿಕೊಳ್ಳುತ್ತಿಯಾ?" ಎಂದು ತೀಕ್ಷ್ಣವಾಗಿ ಹೇಳಿದರು. ಆಗ ಕಾತ್ಯಾಯಿನಿ 4"ಈ ಸಮಾಜದಲ್ಲಿ ಹೆಣ್ಣಿನ ಬಾಳಿನಲ್ಲಿ ಏನಾದರು ಅಘಾತವಾದರೆ ಪುನಃ ರೂಢಿಸುವ ಸಾಧ್ಯತೆ ಇಲ್ಲ". ವಿಧುರನಾದ ಗಂಡಸು ಹತ್ತು ಸಲ ಮದುವೆಯಾದರೂ ನಡೆಯುತ್ತೇ. ಹೆಣ್ಣಿನ ಅಂತಃಕರಣವನ್ನು ಅರ್ಥಮಾಡಿಕೊಳ್ಳುವ ಸಹಾನುಭೂತಿ ಈ ಜಗತ್ತಿಗೆ ಎಂದಿನಿಂದಲೂ ಇಲ್ಲ"4 ಎಂದಳು ಶ್ರೋತ್ರಿಯವರು ಸಮಾಜದ ನಡವಳಿಕೆ ಕುರಿತಾಗಲಿ, ಜಗತ್ತಿನ ನಡವಳಿಕೆ ಕುರಿತಾಗಲಿ ಯಾವ ತರ್ಕವೂ ಬೇಡ ಇದು ನಿನ್ನೊಬ್ಬಳ ಪ್ರಶ್ನೆ ನಿನ್ನ ನಿಶ್ಚಯಕ್ಕೆ ನಾನು ಅಡ್ಡಿ ಬರೊಲ್ಲ ನಿನಗೆ ತಿಳಿದಂತೆ ಮಾಡು ನಿನಗೆ ಸ್ವಾತಂತ್ರ್ಯವಿದೆ ಎಂದರು.

ಮಾವ ಶ್ರೋತ್ರಿಯವರ ಆದರ್ಶ ಮತ್ತು ಉಪದೇಶಗಳಿಂದ ಪ್ರಭಾವಿತಳಾದ ಕಾತ್ಯಾಯಿನಿ ರಾಜಾರಾಯನನ್ನು ವಿವಾಹವಾಗುವ ತನ್ನ ಅಪೇಕ್ಷೆಗಳನ್ನು ಹತ್ತಿಕ್ಕಲು ಪ್ರಯತ್ನ ಮಾಡಿದಳು ಆದರೆ ತನ್ನ ನಿರ್ಧಾರ ಸಂಪೂರ್ಣವಾಗಿ ನಾಶವಾಗಿರಲಿಲ್ಲ. ರಜಾಕಾಲದ ಒಂದು ದಿನ ಮೈಸೂರಿನಲ್ಲಿ ನನ್ನ ಮೇಡಂ ಒಬ್ಬರ ಮದುವೆ ಇದೆ ಹೋಗುತ್ತೇನೆಂದು ಹೇಳಿ ಹೊರಟಳು. ನೇರವಾಗಿ ರಾಜನ ಮನೆಗೆ ಬಂದಳು. ಸಂಜೆ ರೈಲಿಗೆ, ರಾತ್ರಿಯ ರೈಲಿಗೆ ಕಾತ್ಯಾಯಿನಿ ಬರಲಿಲ್ಲ ಮಾರನೆದಿನ ಒಂದು ಲಕೋಟಿಯನ್ನು ಭಾಗೀರತಮ್ಮ ಶ್ರೋತ್ರಿಯವರಿಗೆ ಕೊಟ್ಟರು. ಆ ಪತ್ರದಲ್ಲಿ ತನ್ನ ಮದುವೆಯ ವಿಚಾರವನ್ನು ಬರೆದಿದ್ದಳು. ಶಿವಪ್ರಕಾಶ್ ಹೋಟಲಿನ ಭೋಜನ ಮತ್ತು ವಸತಿಗೃಹದ ಹಜಾರದಲ್ಲಿ ಇಪ್ಪತ್ತು ಮೂವತ್ತು ಜನಮಿತ್ರರ ಸಮ್ಮುಖದಲ್ಲಿ ರಾಜಾರಾಯ ಮತ್ತು ಕಾತ್ಯಾಯಿನಿಯರ ಮದುವೆ ನಡೆದು ಹೋಯಿತು. ಮದುವೆಯಾದ ಹದಿನೈದು ದಿನಗಳು ನವದಂಪತಿಗಳು ಈ ಪ್ರಪಂಚವನ್ನೆ ಮರೆತಿದ್ದರು.

ರಾಜಾರಾಯನ ಅಣ್ಣನ ಮಗ ಪೃಥ್ವಿಯನ್ನು ನೋಡಿದಾಗಲೆಲ್ಲ ಕಾತ್ಯಾಯಿನಿಗೆ ತನ್ನ ಮಗ ಚೀನಿಯ ನೆನಪು ಬರುವುದು. "ತಾನು ನಂಜನಗೂಡಿನಿಂದ ಹೊರಡುವಾಗ ಅಮ್ಮ ನಾನು ಬರ್ತೀನಿ ಕರೆದುಕೊಂಡು ಹೋಗು" ಎಂದು ಕೂಗುತ್ತಿದ್ದ ಮಗನಿಗೆ ನೀನು ಆಮೇಲೆ ಬರುವೆಯಂತೆ ಎಂದು ಸಮಾಧಾನ ಹೇಳಿ ಬಂದಿದ್ದ ಚಿತ್ರ ಅವಳ ಕಣ್ಣಮುಂದೆ ಬರುತ್ತಿತ್ತು. ಮಗನನ್ನು ಕಳುಹಿಸಿಕೊಡಬೇಕೆಂದು ಕಾಗದ ಬರೆದಳು. ಇದಕ್ಕೆ ಅತ್ತೆಮಾವರು ಒಪ್ಪಲಿಲ್ಲ. 5"ನನ್ನ ದೃಷ್ಟಿಯಲ್ಲಿ ಮಕ್ಕಳು ತಾಯಿಗೂ ಸೇರಿದವನಲ್ಲ, ತಂದೆಗೂ ಸೇರಿದವರಲ್ಲ, ಅವು ವಂಶದ ಆಸ್ತಿ" ಯಾರೊಬ್ಬರ ವೈಯಕ್ತಿಕವಾಗಿ ಅವುಗಳ ಮೇಲೆ ಹಕ್ಕು ಸ್ಥಾಪಿಸಲು ಹೊರಟರೆ ಅವು ಯಾರಿಗೂ ದಕ್ಕುವುದಿಲ್ಲ5 ಎಂದಾಗ ಕಾತ್ಯಾಯಿನಿ ನಾನು ಯಾವ ಹಕ್ಕಿನಿಂದಲೂ ಹೇಳುತ್ತಿಲ್ಲ ತಾಯಿ ಕರುಳಿನ ಕೂಗನಷ್ಟೆ ಹೇಳಿದೆ ಎಂದಾಗ ಶ್ರೋತ್ರಿಯವರು ವಂಶವೃಕ್ಷವನ್ನು ಬಿಟ್ಟ ಯಾವ ಕುಡಿಯೂ ತಾಯ್ತನದ ಹೆಮ್ಮೆಯನ್ನು ಹೇಳಲಾರದು. ಮಾತೃತ್ವ, ಪಿತೃತ್ವ ಭ್ರಾತೃತ್ವ ಎಲ್ಲವೂ ವಂಶದ ಹಿನ್ನಲೆಯಲ್ಲೆ, ವಂಶದ ಉದ್ದೇಶವನ್ನು ಪೂರ್ಣಗೊಳಿಸುವುದರಲ್ಲೆ ಇರುವಂತ

3. ವಂಶವೃಕ್ಷ –ಎಸ್.ಎಲ್ ಭೈರಪ್ಪ, ಪುಟ–143, 2004
4. ವಂಶವೃಕ್ಷ –ಎಸ್.ಎಲ್.ಭೈರಪ್ಪ, ಪುಟ–143, 2004
5. ವಂಶವೃಕ್ಷ –ಎಸ್.ಎಲ್.ಭೈರಪ್ಪ, ಪುಟ–190, 2004

ಹೂಗಳೂ ಎಂದು ಹೇಳಿದರು. ಇಷ್ಟೆಲ್ಲಾ ಆದ ಮೇಲೆ ಕರೆದುಕೊಂಡು ಹೋಗಲೇಬೇಕೆಂದು ನಿನ್ನ ಆತ್ಮ ಹೇಳಿದರೆ ಎತ್ತಿಕೊಂಡು ಹೋಗು ಎಂದು ಶ್ರೋತ್ರಿಯವರು ಹೇಳಿದರು, ಚಿಂತಿಸಿ ದುಃಖಿಸುತ್ತಾ ಕಾತ್ಯಾಯಿನಿ ಮನೆಯಿಂದ ಹೊರಟು ಹೋದಳು.

ರಾಜಾರಾಯರೊಡನೆ ಎಂಟು ವರ್ಷ ದಾಂಪತ್ಯ ಜೀವನ ಕಾತ್ಯಾಯಿನಿಯನ್ನು ಸಾಕಷ್ಟು ಬದಲಾಯಿಸಿತು. ಗಂಡನ ಮಾತಿನಂತೆ ಬನಾರಸ್ ವಿಶ್ವವಿದ್ಯಾನಿಲಯದಿಂದ ಪ್ರೈವೆಟ್ ವಿದ್ಯಾರ್ಥಿನಿಯಾಗಿ ಇಂಗ್ಲೀಷ್ ಎಂ.ಎ ಪರೀಕ್ಷೆ ಕಟ್ಟಿದಳು. ಎರಡನೇ ವರ್ಷದ ಪರೀಕ್ಷೆಗಾಗಿ ಬನಾರಸ್‌ಗೆ ಹೋಗುವ ವೇಳೆಗೆ ಕಾತ್ಯಾಯಿನಿ 4 ತಿಂಗಳ ಗರ್ಭಿಣಿಯಾಗಿದ್ದಳು. ಆರನೇ ತಿಂಗಳು ತುಂಬುವ ಹೊತ್ತಿಗೆ ಹೊಟ್ಟೆನೋವು ಪ್ರಾರಂಭವಾಗಿ ಗರ್ಭಶ್ರಾವವಾಯಿತು. ರಾಜಾರಾಯರಿಗೆ ಅಸಿಸ್ಟೆಂಟ್ ಪ್ರೊಫೆಸರ್ ಆಗಿ ಬೆಂಗಳೂರಿಗೆ ಟ್ರಾನ್ಸ್‌ಫರ್ ಆಗಿತ್ತು. ಬೆಂಗಳೂರಿಗೆ ಬಂದಮೇಲೆ ಕಾತ್ಯಾಯಿನಿ ಅಧ್ಯಾಪಕಿಯಾಗಿ ಕೆಲಸಕ್ಕೆ ಸೇರಿಕೊಂಡಳು. ಅಲ್ಲಿಯೂ ಗರ್ಭಿಣಿಯಾಗಿ ಆರುತಿಂಗಳ ತುಂಬುವ ಹೊತ್ತಿಗೆ ಮತ್ತೆ ಗರ್ಭಪಾತವಾಯಿತು.

ಇತ್ತ ಭಾಗೀರತಮ್ಮನ ಆರೋಗ್ಯ ಇತ್ತೀಚೆಗೆ ಸರಿಯಿರಲಿಲ್ಲ ಸೊಸೆ ಹೊರಟಮೇಲೆ ಮಾನಸಿಕ ಆಶ್ರಯವು ತಪ್ಪಿಹೋದಂತಾಗಿತ್ತು. ಕ್ರಮೇಣ ಆರೋಗ್ಯ ಕ್ಷೀಣಿಸಿ ಭಾಗೀರಥಮ್ಮ ಸಾವನಪ್ಪಿದರು. ಇತ್ತ ಕಾತ್ಯಾಯಿನಿ ಮೊದಲಿನಂತೆ ಕಾಲೇಜಿಗೆ ಹೋಗಲು ದೈಹಿಕವಾಗಿ ಮತ್ತು ಮಾನಸಿಕವಾಗಿ ಶಕ್ತಳಾಗಿರಲಿಲ್ಲ ಮತ್ತೆ ರಾಜಾರಾಯ ಮತ್ತು ಕಾತ್ಯಾಯಿನಿಯರು ಮೈಸೂರಿಗೆ ವರ್ಗಮಾಡಿಸಿಕೊಂಡು ಬಂದರು. ನಂಜನನಗೂಡಿನಲ್ಲಿ ಎಸ್.ಎಸ್.ಎಲ್.ಸಿ ಮುಗಿಸಿ ಚೀನಿ ಈಗ ಕಾತ್ಯಾಯಿನಿಯು ಅಧ್ಯಾಪಕಿಯಾಗಿದ್ದ ಮೈಸೂರಿನ ಇಂಟರ್‌ಮೀಡಿಯಟ್ ಜೂನಿಯರ್ ತರಗತಿಗೆ ಸೇರಿದ್ದಾನೆ. ಮೊದಲ ದಿನವೇ ಹಾಜರಾತಿ ತೆಗೆದುಕೊಳ್ಳುತ್ತಿರುವಾಗಲೇ ಕಾತ್ಯಾಯಿನಿಯು ಚೀನಿಯನ್ನು ಸ್ಪಷ್ಟವಾಗಿ ಗುರುತಿಸಿದ್ದಳು. ತರಗತಿಯಿಂದ ಹೊರಗೆ ಬರುವಾಗ ಮಾತನಾಡಿಸಬೇಕೆಂದು ಬಾಗಿಲ ಬಳಿಯಲ್ಲಿ ಕಾತ್ಯಾಯಿನಿ ನಿಂತಿರುವಾಗ ಆತ ತನ್ನ ಸಹಪಾಠಿಯ ಜೊತೆ ನೋಡಿಯೂ ನೋಡದಂತೆ ತಲೆತಗ್ಗಿಸಿಕೊಂಡು ಹೊರಟು ಹೋದನು.

ಕಾತ್ಯಾಯಿನಿ ಹೀಗೆ ನಾಲ್ಕನೇ ದಿನ ನಿರೀಕ್ಷಿದರೂ ಚೀನಿ ತನ್ನನ್ನೂ ಗಮನಿಸಿದಿರುವುದನ್ನು ಕಂಡು ನಿರಾಸೆಯಾಯಿತು. ಕಡೆಗೆ ಒಂದು ದಿನ ತನ್ನ ಉದ್ವೇಗವನ್ನು ತಡೆಯಲಾರದೆ ಒತ್ತಾಯದಿಂದ ಚೀನಿಯನ್ನು ಮನೆಗೆ ಕರೆದುಕೊಂಡು ಹೋದಳು. ಅವನನ್ನು ಖುರ್ಚಿಯಲ್ಲಿ ಕೂರಿಸಿ ಮಾತನಾಡಿಸಿದಳು. ಹುಡುಗನು ಸಂಕೋಚದಿಂದ, ತಲೆತಗ್ಗಿಸಿ ಕುಳಿತಿದ್ದನು ಕಾತ್ಯಾಯಿನಿ ಕೇಳಿದಪ್ರಶ್ನೆಗೆ ಉತ್ತರ ಕೊಟ್ಟ ನಿನಗೆ ನಿಮ್ಮ ತಾಯಿಯನ್ನ ನೋಡಿದ ನೆನಪಿದೆಯಾ? ಎಂದಾಗ ಇಲ್ಲ ನಿನ್ನ ತಾಯಿ ನೋಡುವ ಆಸೆ ಇಲ್ಲವೇ? ಎಂದಾಗ 'ಇಲ್ಲ' ಎಂದು ಉತ್ತರಕೊಟ್ಟಾಗ ಕಾತ್ಯಾಯಿನಿಗೆ ಎದೆಯ ಮೇಲೆ ಕಲ್ಲು ಚಪ್ಪಡಿ ಬಿದ್ದಂತಾಯಿತು. ಕಣ್ಣಿನಲ್ಲಿ ನೀರು ತುಂಬಿ ತಲೆತಗ್ಗಿಸಿ ಕುಳಿತಳು. ಪುನಃ ತಲೆ ಎತ್ತಿ ನೋಡುವ ವೇಳೆಗೆ ಚೀನಿ ಅಲ್ಲಿಂದ ಹೊರಟು ಹೋಗಿದ್ದ. ಮಾನಸಿಕ ಆಘಾತದಿಂದ ಜ್ವರ ಬಂದು ಒಂದು ವಾರ ಹಾಸಿಗೆ ಹಿಡಿದು ಮಲಗಿ ಕಾಲೇಜಿಗೆ ರಜಾ ಹಾಕಿದ ಕಾತ್ಯಾಯಿನಿ ಚೇತರಿಸಿಕೊಂಡು ಪುನ ಬರುವ ವೇಳೆಗೆ ಚೀನಿ ಕಾಲೇಜನ್ನು ಬಿಟ್ಟುಬಿಟ್ಟಿದ್ದ.

ಡಾ॥ ಸದಾಶಿವರಾಯರು ಮಹಾಗ್ರಂಥದ ಐದನೇ ಸಂಪುಟಕ್ಕಾಗಿ ಹಗಲಿರುಳು ಎನ್ನದೆ ಕರುಣಾರತ್ನ ಜೊತೆ ಸತತವಾಗಿ ಶ್ರಮಿಸಿದರು. ಇಂತಹ ಸಂದರ್ಭದಲ್ಲಿ ರಾಯರಿಗೆ ಇದ್ದಕ್ಕಿದ್ದಂತೆ ಹೃದಯಾಘತವಾಗಿತ್ತು ಮತ್ತೆ ಹೃದಯಾಘಾತದಲ್ಲಿ ಸದಾಶಿವರಾಯರು ತೀರಿಕೊಂಡರು. ನಾಗಲಕ್ಷ್ಮಿಗೆ ಕೇಶಮಂಡನೆ ಮಾಡಿಸಿಕೊಂಡು ಕೆಂಪು ಸೀರೆಯುಟ್ಟು ಮಡಿ ಹಿಡಿಯಲು ನಿಶ್ಚಯಿಸಿದಳು, ಇತ್ತ ಕರುಣಾರತ್ನೆ ರಾಯರ ಮರಣ ನಂತರ ಗ್ರಂಥದ ಐದನೇ ಸಂಪುಟದ ಕರಡು ಪ್ರತಿಯನ್ನು ಪರಿಷ್ಕರಿಸಿ ಮತ್ತು ಅನುಕ್ರಮಣಿಕೆಯನ್ನು ಪಟ್ಟಿ ಮಾಡಿದಳು. ಪ್ರಕಾಶಕರ ಕೋರಿಕೆಯಂತೆ ಎಲ್ಲವನ್ನ ಪಟ್ಟಿಮಾಡಿ ತಾನು ಯಾವ ಉದ್ದೇಶಕ್ಕಾಗಿ ಈ ದೇಶಕ್ಕೆ ಬಂದಿದ್ದಳೂ ಅದು ಪೂರ್ಣವಾಯಿತು ನಂತರ ತನ್ನ ಸ್ವದೇಶಕ್ಕೆ ಹಿಂದಿರುಗಿದಳು.

ಇತ್ತ ಕಡೆ ಶ್ರೋತ್ರಿಯವರು ತನ್ನ ಮೊಮ್ಮಗ ಚೀನಿಗೆ ಎಲ್ಲಾ ವ್ಯವಹಾರವನ್ನು ವಹಿಸಿಕೊಟ್ಟು ತಾನು ಸನ್ಯಾಸತ್ವ ಸ್ವೀಕರಿಸಬೇಕೆಂದು ನಿರ್ಧರಿಸಿ ಅನಂತರಾಮ ಮೇಷ್ಟರ ಮಗಳು ಸರ್ವಲಕ್ಷಣ ಸಂಪನ್ನೆಯಾದ ಲಲಿತೆಯೆಂಬ ವಧುವಿನೊಡನೆ ವಿವಾಹ ಮಾಡಿದರು. ಕೊನೆಗೆ ಕಾತ್ಯಾಯಿನಿಯನ್ನು ನೋಡಬೇಕೆಂಬ ಆಸೆಯಿಂದ ರೈಲಿನಲ್ಲಿ ಪ್ರಯಾಣ ಮಾಡಿ ಚಾಮರಾಜನಗರದಲ್ಲಿ ಇಳಿದು ಲಕ್ಷ್ಮಿಪುರದಲ್ಲಿದ ರಾಜಾರಾಯರ ಮನೆಗೆ ಹೋದರು. ಕಾತ್ಯಾಯಿನಿ ಕಾಯಿಲೆಯಿಂದ ಹಾಸಿಗೆ ಹಿಡಿದು ಮಲಗಿದ್ದಾಳೆ. ದೇಹ ಶೀಥಿಲವಾಗಿದೆ ಇದನ್ನು ನೋಡಿ ಶ್ರೋತ್ರಿಯವರಿಗೆ ಕಣ್ಣಿನಲ್ಲಿ ನೀರುಬಂತು.

ಏನು ಕಾಯಿಲೆ? ಡಾಕ್ಟರ್‌ನ್ನು ಕರೆಸಿದ್ದಿರಾ? ಎಂದಾಗ ಡಾಕ್ಟರ್‌ರಿಂದ ವಾಸಿಯಾಗುವ ಕಾಯಿಲೆಯಲ್ಲ ಇದು ಅವಳ ಮನಸ್ಸಿನಲ್ಲಿ ಪಾಪ-ಪುಣ್ಯಗಳ, ಧರ್ಮ-ಕರ್ಮಗಳ ತಿಕ್ಕಾಟ ಪ್ರಾರಂಭವಾಗಿದೆ. ಮೂರು ಸಲ ಗರ್ಭಪಾತವಾಯಿತು. ತನ್ನ ಪಾಪದ ಫಲವೇ ಹೀಗಾಗಲು ಎಂಬ ಪ್ರಜ್ಞೆ ಅವಳಲ್ಲಿ ಬೆಳೆಯಿತು. ಕೊನೆಗೆ ಮಗನಿಂದಲೂ ತಿರಸ್ಕೃತಳಾದ ಮೇಲೆ ಸಂಪೂರ್ಣ ಹತಾಶಳಾದಳು ಅಂದಿನಿಂದ ಅವಳ ಸುಪ್ತ ಪ್ರಜ್ಞೆ ಸಾಯುವ ಸಂಕಲ್ಪ ಮಾಡಿತು. ಸಾಯುವ ಮುಂಚೆ ನಿಮ್ಮನ್ನು ಮತ್ತು ತನ್ನ ಮಗನನ್ನು ನೋಡುವ ಇಂಗಿತ ವ್ಯಕ್ತಪಡಿಸಿದಳು. ನೀವು ಬಂದಿರಿ ಚೀನ್ನಿಯನ್ನು ಕರೆತರಲು ಪೃಥ್ವಿಯನ್ನು ಕಳಿಸಿದ್ದೇನೆ. ಅವಳ ಮಗ ಬರುತ್ತಾನೋ ಇಲ್ಲವೂ ಎಂಬ ಪ್ರಶ್ನೆಗೆ ಶ್ರೋತ್ರಿಯವರು ಖಂಡಿತ ಬರುತ್ತಾನೆ ಎಂಬ ಭರವಸೆ ಕೊಟ್ಟರು. ನೀವು ಬಂದಿರಲ್ಲ ಅಷ್ಟು ಸಾಕು. ನನಗೆ ನಿಮ್ಮ ಪರಿಚಯವಿದ್ದಿದ್ದರೆ ನಿಮ್ಮ ಸ್ವಭಾವ ತಿಳಿದಿದ್ದಾರೆ ನಾನು ಇವಳನ್ನು ಮದುವೆ ಆಗುತ್ತಿರಲಿಲ್ಲವೇನೋ, ನೀವು ನನ್ನನ್ನು ಕ್ಷಮಿಸಬೇಕೆಂದು ಕೇಳಿಕೊಳ್ಳುತ್ತಾನೆ. ಬ್ರಹ್ಮನಿಯಮ ನಿಮ್ಮ ತಪ್ಪೇನು ಎಂದು ರಾಜಾರಾಯನನ್ನು ಸಂತೈಸಿದರು. ಕಾತ್ಯಾಯಿನಿ ಮಂಚದ ಹತ್ತಿರ ಬಾಗಿ ಕಿವಿಯಲ್ಲಿ ರಾಜಾರಾಯ ಹೇಳಿದ ಮೇಲೆ ಅವಳಿಗೆ ಅರ್ಥವಾಗಿ ಕಾತ್ಯಾಯಿನಿಯ ಕೈಗಳನ್ನು ಶ್ರೋತ್ರಿಯವರ ಪಾದಗಳ ಮೇಲೆ ಇರಿಸಿದ. ಅವಳ ಕಣ್ಣುಗಳಲ್ಲಿ ನೀರು ತುಂಬಿ ಬಂದವು. ಅಷ್ಟರಲ್ಲಿ ಪೃಥ್ವಿ ಮತ್ತು ಚೀನಿಯರು ಒಳಗೆ ಬಂದರು. ಕುರ್ಚಿಯಲ್ಲಿ ಕುಳಿತ್ತಿದ್ದ ತಾತನನ್ನು ಕಂಡು ಚೀನಿಗೆ ಆಶ್ಚರ್ಯವಾಯಿತು. ಆಗ ಶ್ರೋತ್ರಿಯವರು "ಬಾ ಮಗು, ನೀನು ಈಗಲಾದರೂ ನಿಮ್ಮಮ್ಮನ ಸೇವೆ ಮಾಡಬೇಕು" ಎಂದು ಚೀನಿಯನ್ನು ಮಂಚದ ತುದಿಯಲ್ಲಿ ಕೂರಿಸಿ, ನಿಮ್ಮಮ್ಮನ ಕೈ

ಹಿಡಿದಿಕೊ ಎಂದರು ಹತ್ತು ನಿಮಿಷ ಕಾತ್ಯಾಯಿನಿ ಉಸಿರು ಏದುಸಿರಿನಂತೆ ಏರುತ್ತಿತ್ತು. ಕ್ರಮೇಣ ಶಾಂತವಾಯಿತು. ನಂತರ ಉಸಿರು ಶಾಶ್ವತವಾಗಿ ಅವಳ ಜೀವನದಲ್ಲಿ ಎದ್ದು ಅವಳ ನೋವಿನಲ್ಲಿ ಪಾಪ, ಪುಣ್ಯಗಳ ಸುಳಿಯಲ್ಲಿ ಸಿಕ್ಕಿಸಿದ್ದ ದ್ವಂದ್ವ ಅಂತ್ಯವಾದವು. ಶ್ರೋತ್ರಿಯವರು ಅಲ್ಲಿಂದ ಹೊರಟಾಗ ಚೀನಿ 'ಈಗ ಸತ್ತಿರೋದು ನನ್ನ ತಾಯಿ ಅವರ ಉತ್ತರಕ್ರಿಯಾದಿಗಳನ್ನು ನಾನು ಮಾಡಬೇಕೆ?' ಎಂದು ಕೇಳಿದಾಗ ಶ್ರೋತ್ರಿಯವರು ಯೋಚಿಸಿ "ಮಗೂ ಮತ್ತೊಬ್ಬರ ಪಾಪ ಪುಣ್ಯಗಳನ್ನು ನಿರ್ಣಯಿಸುದಕ್ಕೆ ನಮಗೆ ಅಧಿಕಾರವಿಲ್ಲ, ಅದರಲ್ಲೂ ಮಾತಾಪಿತೃಗಳ ಜೀವನವನ್ನು ಅಳೆಯೋದು ಮಹಾಪಾಪ, ನಮ್ಮ ಕರ್ಮಗಳನ್ನು ಮಾಡುವುದು ನಮ್ಮ ಕರ್ತವ್ಯ ನೀನು ಶ್ರದ್ಧಾ ಭಕ್ತಿಯಿಂದ ನಿಮ್ಮಮ್ಮನ ಎಲ್ಲಾ ಉತ್ತರಕ್ರಿಯೆಗಳನ್ನು ನಡೆಸು. ನಾನು ಹೀಗೆ ಹೇಳಿದೆ ಅಂತ ನಿಮ್ಮ ಮಾವನವರಿಗೂ ತಿಳಿಸು ಕಪಿಲೆಯ ದಂಡೆಯಲ್ಲಿಯೇ ಉತ್ತರಕ್ರಿಯೆಗಳನ್ನು ಮಾಡು ನೀನ್ನಿನ್ನು ಹೋಗು ಶವಸಂಸ್ಕಾರವು ನಿನಗೆ ಸೇರಿದ್ದು ಎಂದು ಹೇಳಿ ಮುಂದೆ ಹೆಜ್ಜೆ ಹಾಕಿದರು.

ಶ್ರೋತ್ರಿಯವರ ಸನ್ಯಾಸತ್ವ, ಚೀನಿ ತನ್ನ ತಾಯಿ ಕಾತ್ಯಾಯಿನಿಯ ಸಂಸ್ಕಾರ ಮಾಡುವುದರೊಂದಿಗೆ ಕಾದಂಬರಿ ಮುಗಿಯುತ್ತದೆ. ಕಾದಂಬರಕಾರರು ಇಲ್ಲಿ ಎರಡು ಕುಟುಂಬಗಳ ಕಥೆಯನ್ನು ತಂದು ಆ ಕುಟುಂಬಗಳ ನಡೆವೆ ಮಧ್ಯೆ ಮಧ್ಯೆ ಸಂಬಂಧ ಕಲ್ಪಿಸಿ ಕೊನೆಗೆ ಎರಡು ಕುಟುಂಬಗಳು ಒಂದಾಗುವ ರೀತಿಯ ಕಥಾವಿನ್ಯಾಸವನ್ನು ಬಳಸಿಕೊಂಡು ಓದುಗರ ಮನಸ್ಸಿನಲ್ಲಿ ರಹಸ್ಯಮಯವಾಗಿ ಕುತೂಹಲ ಕೆರಳಿಸುವಂತಹ ತಂತ್ರವನ್ನು ಬಳಸಿಕೊಂಡು ಕಾದಂಬರಿಯನ್ನು ಬರೆದಿದ್ದಾರೆ.

ಸಂಸ್ಕಾರ ಮತ್ತು ವಂಶವೃಕ್ಷ ಈ ಎರಡು ಕಾದಂಬರಿಗಳಲ್ಲಿ ಬ್ರಾಹ್ಮಣ ಧರ್ಮದ ಆಚರಣೆ, ನಂಬಿಕೆ, ಸಂಪ್ರದಾಯಗಳು ಕಂಡು ಬರುತ್ತವೆ. ಸಂಸ್ಕಾರದಲ್ಲಿ ನಾರಾಣಪ್ಪನ ಸಾವಿನ ಸುದ್ದಿ ತಿಳಿದು ಇಡಿ ಅಗ್ರಹಾರದ ಬ್ರಾಹ್ಮಣರಲ್ಲಿ ಏಳುವ ಪ್ರಶ್ನೆ ನಾರಾಣಪ್ಪನ ಶವಸಂಸ್ಕಾರವನ್ನು ಯಾರು ಮಾಡಬೇಕೆಂಬುವುದು ಬಹುದೊಡ್ಡ ಪ್ರಶ್ನೆಯಾಗಿ ನಿಂತು ಇಡೀ ಕಾದಂಬರಿಯು ಮುಂದುವರಿಯುತ್ತದೆ. ವಂಶವೃಕ್ಷ ಕಾದಂಬರಿಯಲ್ಲಿ ಕಾತ್ಯಾಯಿನಿ ಸಾವಿನ ನಂತರ ಶ್ರೀನಿವಾಸಶ್ರೋತ್ರಿಯವರು ತನ್ನ ಮೊಮ್ಮಗ ಚೀನಿಗೆ ಶವ ಸಂಸ್ಕಾರ ಮಾಡುವ ಜವಾಬ್ದಾರಿ ನಿನ್ನದೆಂದು ತಿಳಿಸಿ ಹೋಗುತ್ತಾರೆ. ಎರಡು ಕಾದಂಬರಿಗಳಲ್ಲಿ ಬ್ರಾಹ್ಮಣ ಧರ್ಮದ ನಿಷ್ಠೆ, ಸಡಿಲತೆ, ಸಂಪ್ರದಾಯಗಳು ವ್ಯಕ್ತವಾಗಿದೆ. ನಾರಾಣಪ್ಪ ಜಾತಿಯನ್ನು ಮೀರಿ ನಡೆದುಕೊಳ್ಳುವುದು ಸಂಸ್ಕಾರದಲ್ಲಿದ್ದಾರೆ ಕಾತ್ಯಾಯಿನಿ ಬ್ರಾಹ್ಮಣ ಸಂಪ್ರದಾಯಗಳನ್ನು ಸರಿಸಿ ಎರಡನೇ ಮದುವೆಯಾಗುವುದು. ಈ ಪಾತ್ರಗಳ ಮೂಲಕ ಕಾದಂಬರಿಕಾರರು ಪ್ರಗತಿಪರವಾದ ನಿಲುವುಗಳನ್ನು ಸಮರ್ಥಿಸಿರುವುದನ್ನು ಕಾಣಬಹುದು.

ಅಧ್ಯಾಯ – 2

## ಪ್ರಮುಖ ಸನ್ನಿವೇಶಗಳು

ಯಾವುದೇ ಒಂದು ಸಾಹಿತ್ಯ ಕೃತಿಯ ಬೆಳವಣಿಗೆ ಸನ್ನಿವೇಶಗಳು ಕಾರಣವಾಗುತ್ತದೆ. ಒಂದು ಕೃತಿಯಲ್ಲಿ ಹತ್ತಾರು ಸನ್ನಿವೇಶಗಳು ಬರುತ್ತವೆ ಹಾಗೆಯೇ ಆಕಸ್ಮಿಕ ಘಟನೆಗಳು ಕೃತಿಯ ಬೆಳವಣಿಗೆ ಕಾರಣವಾಗುತ್ತದೆ. ಸಂಸ್ಕಾರ ಮತ್ತು ವಂಶವೃಕ್ಷ ಕಾದಂಬರಿಗಳಲ್ಲಿ ಹಲವಾರು ಘಟನೆಗಳು ಕಾದಂಬರಿಯ ಬೆಳವಣಿಗೆಗೆ ಕಾರಣವಾಗಿವೆ. ಕಾದಂಬರಿಕಾರರು ಇಂತಹ ಘಟನೆಗಳ ಮೂಲಕ ತಮ್ಮ ಕಾದಂಬರಿಯನ್ನು ಬೆಳೆಸಿರುವುದನ್ನು ಕಾಣಬಹುದು. ಸಂಸ್ಕಾರ ಕಾದಂಬರಿಯಲ್ಲಿ ಕೆಲವು ಘಟನೆಗಳು ಮುಖ್ಯವಾಗಿ ಕೃತಿಯ ಬೆಳವಣಿಗೆಯನ್ನು ಮುಂದುವರಿಸಿವೆ.

ಸಂಸ್ಕಾರ ಕಾದಂಬರಿಯಲ್ಲಿ ಕಾಣಬರುವ ಪ್ರಮುಖ ಸನ್ನಿವೇಶಗಳೇಂದರೆ.

### ನಾರಣಪ್ಪನ ಸಾವು

ಭಾರತೀಯ ಸಂಸ್ಕೃತಿಯಲ್ಲಿ ಮಾನವನ ಹುಟ್ಟು-ಸಾವು, ಬಹಳ ಮುಖ್ಯವಾದವು ಹುಟ್ಟು ಆನಂದವನ್ನು ತಂದರೆ ಸಾವು ದುಃಖವನ್ನು ತರುತ್ತದೆ. ಬಾಳಿ ಬದುಕಿದ ವ್ಯಕ್ತಿಯು ಕೊನೆಯುಸಿರು ಎಳೆದಾಗ ಅವನಿಗೆ ಸಂಸ್ಕಾರ ಮಾಡುವುದು ಭಾರತೀಯ ವ್ಯವಸ್ಥೆಯಲ್ಲಿ ಒಂದು ಪುಣ್ಯ ಕಾರ್ಯ. ಮತ್ತು ಪವಿತ್ರವಾದ ಕೆಲಸವೆಂದು ತಿಳಿದಿದ್ದಾರೆ. ಸಂಸ್ಕಾರ ಕಾದಂಬರಿಯಲ್ಲಿ ನಾರಣಪ್ಪನ ಸಾವಿನ ಸುದ್ಧಿಯೇ ಇಡೀ ಕಾದಂಬರಿಯ ಕೇಂದ್ರ ಸಂದೇಶವನ್ನು ಅಡಕವಾಗಿ ಮಂಡಿಸಿದೆ. ಚಂದ್ರಿ ಬಂದು ಪ್ರಾಣೇಶಾಚಾರ್ಯರಿಗೆ ನಾರಣಪ್ಪನ ಸಾವಿನ ಸುದ್ಧಿಯನ್ನು ಹೇಳಿದಳು ಪ್ರಾಣೇಶಾಚಾರ್ಯರು ಈ ಸುದ್ಧಿಯನ್ನು ಅಗ್ರಹಾರ ಬ್ರಾಹ್ಮಣರಿಗೆಲ್ಲ ತಿಳಿಸುತ್ತಾರೆ. ಈ ವಿಷಯದ ಮೂಲಕವೇ ಕಾದಂಬರಿಯು ಪ್ರಾರಂಭವಾಗುತ್ತದೆ. ಸಾವಿನ ಸುದ್ಧಿಯ ತಿಳಿದ ನಂತರ ಅಗ್ರಹಾರದ ಪ್ರತಿಯೊಬ್ಬ ಬ್ರಾಹ್ಮಣನ ಮನೋಭಾವ, ಅವ್ಯಕ್ತ ಮನಸ್ಥಿತಿಗಳು ಮೂಡಿ ಎಲ್ಲರು ಒಂದೊಂದು ರೀತಿಯಲ್ಲಿ ನಾರಣಪ್ಪನನ್ನು ಬೈದರು ಅಗ್ರಹಾರದ ನರಪಿಳ್ಳೆಗೂ ವ್ಯಥೆಯಾಗದಿದ್ದರೂ ಕೂಡ ಎಲ್ಲರ ಹೃದಯದಲ್ಲಿ ಒಂದು ರೀತಿಯ ಅವ್ಯಕ್ತ, ಅಪರಿಚಿತ ಭೀತಿ, ಕಳವಳ ಹುಟ್ಟಿತ್ತು. "ಬದುಕಿನಲ್ಲಿ ವೈರಿ ಸತ್ತು ಅನ್ನಕಂಟಕ, ಶವವಾಗಿ ಇನ್ನೂ ಸಮಸ್ಯೆ" ಎಂದು ಉಡುಪಿಯ ಲಕ್ಷ್ಮಣಾಚಾರ್ಯ ತನ್ನ ಷಡುಕನಾದ ನಾರಣಪ್ಪನನ್ನು ಶಪಿಸಿದನು. ಈತನ ಸಾವಿನ ಸುದ್ಧಿ ಇಡೀ ಅಗ್ರಹಾರಕ್ಕೆ ಕಂಟಕವಾಗಿ ಶವಸಂಸ್ಕಾರದ ಬಗ್ಗೆ ಚರ್ಚೆಯಾಗಿ ಯಾರು ಶವಸಂಸ್ಕಾರ ಮಾಡಬೇಕು ಎಂಬ ಸಂದಿಗ್ಧತೆ ಉಂಟಾಗುತ್ತದೆ. ಒಬ್ಬೊಬ್ಬರು ಒಂದೊಂದು ರೀತಿಯಲ್ಲಿ ನಾರಣಪ್ಪನ ಬಗ್ಗೆ ತಮ್ಮ ಅನಿಸಿಕೆಗಳನ್ನು ಹೇಳುತ್ತಾ ಬ್ರಾಹ್ಮಣತ್ವ ವಿಚಾರ ಪ್ರಸ್ತಾಪಿಸಿ ಸಂಪ್ರದಾಯ ಆಚರಣೆ, ನಂಬಿಕೆ ಮುಂತಾದ ವಿಚಾರಗಳ ಹಿನ್ನೆಲೆಯಲ್ಲಿ ವಿಚಾರವನ್ನು ಮಂಡಿಸಿದರು. ಈ ಸಾವಿನ ವಿಚಾರವಾಗಿ ಎರಡು ಪ್ರಶ್ನೆಗಳು ಉದ್ಭವಿಸಿದವು. ಮೊದಲನೆಯದು ಶವಸಂಸ್ಕಾರ ಮಾಡಬೇಕು?. ಎರಡನೆಯದು ಅವನಿಗೆ ಮಕ್ಕಳಿಲ್ಲ ಯಾರು ಉತ್ತರಕ್ರಿಯೆ ಮಾಡಬೇಕು? ಎಂಬುದು. ಶವ ಸಂಸ್ಕಾರ

ಮಾಡದೆ ಯಾರೂ ಊಟ ಮಾಡುವಂತಿಲ್ಲ ಹಾಗಂತ ಹಸಿದುಕೊಂಡು ಇರಲು ಸಾಧ್ಯವಿಲ್ಲ. ಇಂತಹ ಸಂದಿಗ್ಧತೆಯಲ್ಲಿ ಬ್ರಾಹ್ಮಣರೆಲ್ಲರು ಪ್ರಾಣೇಶಚಾರ್ಯರ ತೀರ್ಮಾನದಂತೆ ನಡೆದುಕೊಳ್ಳಬೇಕು ಏಕೆಂದರೆ ನಾರಣಪ್ಪನು ಮಾಂಸತಿನ್ನುತ್ತಿದ್ದ, ಮಧ್ಯಪಾನ ಮಾಡುತ್ತಿದ್ದ, ಮುಸ್ಲೀಮರ ಜೊತೆಸೇರಿ ದೇವಸ್ಥಾನದ ಕಲ್ಯಾಣಿಯಲ್ಲಿ ಮೀನು ಹಿಡಿಯುತ್ತಿದ್ದ. ಕೀಳು ಜಾತಿಯ ಚಂದ್ರಿಯ ಜೊತೆ ಸಂಬಂಧವನ್ನು ಹೊಂದಿದ್ದು ಬ್ರಾಹ್ಮಣ ಜಾತಿಯಲ್ಲಿ ಪರಂಪರಾಗತವಾಗಿ ಬಂದಿದ್ದ ಮೌಲ್ಯಗಳನ್ನ ದಿಕ್ಕರಿಸಿ ಐಷಾರಾಮವಾಗಿ ಬದುಕಿದ್ದ ನಾರಣಪ್ಪ ಬ್ರಾಹ್ಮಣರಿಗೆ ಕಂಟಕವಾಗಿ ಪರಿಣಮಿಸಿದ್ದ.

ನಾರಣಪ್ಪ ಜಾತಿ ಧರ್ಮಗಳನ್ನು ದಿಕ್ಕರಿಸಿದ್ದರು ಬ್ರಾಹ್ಮಣತ್ವದಿಂದ ಅವನನ್ನು ಶಾಸ್ತ್ರೋಕ್ತವಾಗಿ ಬ್ರಾಹ್ಮಣರು ಬಹಿಷ್ಕಾರ ಹಾಕಿರಲಿಲ್ಲ. ಶೂದ್ರಳೊಬ್ಬಳನ್ನು ಸೂಳೆಯಾಗಿಟ್ಟುಕೊಂಡಾಕ್ಷಣ ಬ್ರಾಹ್ಮಣ್ಯ ನಾಶವಾಗಲ್ಲ. ಆತ ತಾಳಿಕಟ್ಟಿದ ಹೆಂಡತಿಯನ್ನ ಬಿಟ್ಟ, ಬ್ರಾಂತಿ ಹಿಡಿದು ಸತ್ತ ಹೆಂಡತಿಯ ಉತ್ತರ ಕ್ರಿಯೆಯನ್ನು ಮಾಡಲಿಲ್ಲ, ಸ್ವತಃ ಅಪ್ಪ-ಅಮ್ಮನ ಶ್ರಾದ್ಧಾನೂ ಮಾಡಲಿಲ್ಲ, ಸಾಲಿಗ್ರಾಮವನ್ನು ನೀರಿಗೆ ಎಸೆದು ಥೂ ಎಂದು ಉಗಿದ ಈಗಿದ್ದರೂ ಬ್ರಾಹ್ಮಣವನ್ನು ಅವನೂ ಬಿಟ್ಟರು ಬ್ರಾಹ್ಮಣ್ಯ ಆತನನ್ನು ಬಿಡಲಿಲ್ಲ ಎಂಬೆಲ್ಲ ವಿಚಾರವಾಗಿ ಅಗ್ರಹಾರದ ಬ್ರಾಹ್ಮಣರೆಲ್ಲರು ನಾರಣಪ್ಪನ ಸಾವಿನ ಹಿನ್ನೆಲೆಯಲ್ಲಿ ಸಂಸ್ಕಾರ ವಿಚಾರವಾಗಿ ಇಡೀ ಕಾದಂಬರಿಯಲ್ಲಿ ಮುಖ್ಯವಾದ ಸನ್ನಿವೇಶವಾಗಿ ಕಂಡು ಬರುತ್ತದೆ. ನಾರಣಪ್ಪನ ಸಾವಿನ ಸುದ್ಧಿ ಧರ್ಮ ಸಂಕಟವಾಗಿ ಪರಿಣಮಿಸುತ್ತದೆ. ಏಕೆಂದರೆ ಸಂಸ್ಕಾರ ಮಾಡಿದರೆ ಗಡಿಪಾರು ಮಾಡಬಹುದೆಂಬ ಭಯ ಮಾಡದೇ ಇದ್ದರೆ ಹಸಿವನ್ನು ತಡೆದುಕೊಳ್ಳಲು ಸಾಧ್ಯವಿಲ್ಲ. ನಾರಣಪ್ಪನ ಸಂಬಂಧಿಕನಾದ ಗರುಢಚಾರ್ಯ ಮತ್ತು ನಾರಣಪ್ಪನಿಗೂ ಆಣೆ ಭಾಷೆ ಆಗಿದೆ. ನಾನು ಮಾಡುವುದು ಸರಿಯಲ್ಲ ಒಂದು ವೇಳೆ ಮಾಡಬೇಕೆಂದರೆ, ನೀವೂ ಹೇಳಿದರೆ ಮಾಡುವುದೆ ಸರಿ ಆದರೆ ಅವ ಬ್ರಾಹ್ಮಣ ಹೌದೊ? ಅಲ್ಲವೋ? ಎಂಬುದು ಪ್ರಶ್ನೆ ಏಕೆಂದರೆ ಶೂದ್ರಳ ಸಹವಾಸ ಮಾಡಿದವನು ಎಂದು ಹೇಳಿದನು.

ಪ್ರಾಣೇಶಾಚಾರ್ಯರು, ಲಕ್ಷ್ಮಣಾಚಾರ್ಯನಿಗೆ-ನಾರಣಪ್ಪನಿಗೆ ನಿನ್ನ ಹೆಂಡತಿ ತಂಗಿಯನ್ನೇ ಕೊಟ್ಟಿತ್ತಲ್ಲವೆ ಎಂದು ಹೇಳಿದಾಗ. ಎಲ್ಲಾ ನಿಮ್ಮ ಅಪ್ಪಣೆ, ತಮ್ಮ ಅನುಮತಿ, ನಮಗೇನು ಧರ್ಮಸೂಕ್ಷ್ಮ ಗೊತ್ತು ಕೀಳುಜಾತಿಯ ಹೆಣ್ಣೊಂದರ ಸಂಪರ್ಕ ಹೊಂದಿದ್ದು ಅಲ್ಲದೆ ಅವಳು ಮಾಡಿದ ಊಟವನ್ನು ಮಾಡುತ್ತಿದ್ದ ಇಲ್ಲಿ ಸಂಪ್ರದಾಯ ಬದ್ಧ ಬ್ರಾಹ್ಮಣರು ಸಾವಿನ ವಿಚಾರವಾಗಿ ಚರ್ಚೆ ಮಾಡುತ್ತಾರೆ. ಕಾದಂಬರಿಯಲ್ಲಿ ನಾರಣಪ್ಪನ ಸಾವಿನ ಸನ್ನಿವೇಶ ಕಾದಂಬರಿಯ ಕೇಂದ್ರವಸ್ತುವಾಗಿಯು ಮುಂದೆ ಕಾದಂಬರಿಯ ಮುನ್ನಡೆಗೆ ಕಾರಣವಾಗುತ್ತದೆ. ಶಾಸ್ತ್ರರೀತಿಯಲ್ಲಿ ನಾರಣಪ್ಪನಿಗೆ ಬಹಿಷ್ಕಾರ ಹಾಕಲಿಲ್ಲ ಬಹಿಷ್ಕೃತನಾಗದೆ ಸತ್ತದ್ದರಿಂದ ಅವನು ಬ್ರಾಹ್ಮಣನಾಗಿಯೇ ಸತ್ತಂತೆ ಹಾಗೆ ವಿಚಾರ ಮಾಡಿದಲ್ಲಿ ಬ್ರಾಹ್ಮಣರಲ್ಲದವರಿಗೆ ಅವನ ಶವವನ್ನು ಮುಟ್ಟುವ ಅಧಿಕಾರವಿಲ್ಲ ಎಂದು ಹೇಳುತ್ತಾರೆ. ನಾರಣಪ್ಪನ ಸಾವು ಕಾದಂಬರಿ ಪ್ರಮುಖ ಸನ್ನಿವೇಶವಾಗಿದೆ.

## ಪ್ರಾಣೇಶಾಚಾರ್ಯ ಮತ್ತು ಚಂದ್ರಿಯರ ಸಮಾಗಮ

ಸಂಸ್ಕಾರ ಕಾದಂಬರಿಯಲ್ಲಿ ನಾರಣಪ್ಪನ ಸಾವಿನ ಸುದ್ದಿಯಷ್ಟೇ ಮುಖ್ಯವಾದ ಸನ್ನಿವೇಶ ಎಂದರೆ ಪ್ರಾಣೇಶಾಚಾರ್ಯರ ಮತ್ತು ಚಂದ್ರಿಯರ ಆಕಸ್ಮಿಕ ಸಮಾಗಮದ ಸಂದರ್ಭ. 'ಒಣಗಿ ಮುರುಟುಗಟ್ಟಿದ್ದ ಭಾಗೀರಥಿಯ ಕಿಚುಗಾಯಿ ದೇಹಕ್ಕೆ ಸ್ನಾನ ಮಾಡಿಸಿ ಮಡಿಯುಡಿಸಿ ಪ್ರತಿನಿತ್ಯ ಪೂಜೆ ನೈವೇದ್ಯಾಗಳು ಮುಗಿದ ಮೇಲೆ ದೇವರ ಪ್ರಸಾದದ ಹೂ ಮುಡಿಸಿ ತೀರ್ಥಕೊಟ್ಟು ಅವಳಿಂದ ಕಾಲು ಮುಟ್ಟಿಸಿಕೊಂಡು ಆಶೀರ್ವದಿಸಿ ರವೆಗಂಜಿಯನ್ನು ಬಟ್ಟಲಲ್ಲಿ ಕುಡಿಸುತ್ತ ಅವಳ ಸೇವೆ ಮಾಡಿಕೊಂಡು ಇಪ್ಪತ್ತು ವರ್ಷಗಳಿಂದ ಇದೇ ರೀತಿ ನಸುಕಿನ ಸ್ನಾನ, ಸಂಧ್ಯಾವಂದನೆ, ಅಡಿಗೆ, ಹೆಂಡತಿಗೆ ಮದ್ದು, ಹೊಳೆದಾಟಿ ಹೋಗಿ ಗುಡಿಯ ಮಾರುತಿಗೆ ಪೂಜೆ ಇದು ತಪ್ಪದ ಆಚಾರ. ನಂತರ ಪುರಾಣ, ಪುಣ್ಯ ಕಥೆಗಳ ವಚನ, ಬ್ರಾಹ್ಮಣರಿಗೆ ಪ್ರವಚನ. ಇದು ನಿತ್ಯದ ಕಾಯಕ ಒಂದುದಿನ ನಾರಣಪ್ಪನ ಸೂಳೆ ಚಂದ್ರಿ ಬಂದು ಪ್ರಾಣೇಶಾಚಾರ್ಯರಿಗೆ ನಾರಣಪ್ಪನ ಸಾವಿನ ವಿಚಾರವನ್ನು ತಿಳಿಸಿದಾಗ ಇಡೀ ಅಗ್ರಹಾರದ ಬ್ರಾಹ್ಮಣರಿಗೆ ಪ್ರಾಣೇಶಾಚಾರ್ಯರು ತಿಳಿಸಿ ಶವಸಂಸ್ಕಾರದ ಬಗ್ಗೆ ಚರ್ಚೆ ಪ್ರಾರಂಭವಾಗಿ ಶವಸಂಸ್ಕಾರ ಯಾರು ಮಾಡಬೇಕೆಂಬ ವಿಚಾರವಾಗಿ ಹಲವು ಧರ್ಮಶಾಸ್ತ್ರ ಗ್ರಂಥಗಳನ್ನು ಪೂರ್ಣವಾಗಿ ಪರಿಶೀಲಿಸಿದರೂ ಯಾವುದೇ ಪರಿಹಾರ ದೊರೆಯದಿದ್ದಾಗ ಯೋಚನಾಪ್ರಜ್ಞಾರಾಗಿದ್ದ ಪ್ರಾಣೇಶಾಚಾರ್ಯರಿಗೆ ತಟ್ಟನೆ ಒಂದು ಮಾರ್ಗ ದೊರೆಯುತ್ತದೆ. ಗುಡಿಯ ಮಾರುತಿಯ ಅಪ್ಪಣೆ ಪಡೆಯುವುದೇ ಸೂಕ್ತವೆಂದು ಗುಡಿಯ ಮಾರುತಿಗೆ ಪೂಜೆ ಮಾಡಿ ಅವನ ಪ್ರಸಾದಕ್ಕಾಗಿ ಕಾಯುತ್ತಾರೆ. ಅಲ್ಲಿಯು ಪರಿಹಾರ ಸಿಕ್ಕುವುದಿಲ್ಲ ಜೊತೆಗೆ ಹಸಿವಿನ ಭಾದೆ ಪ್ರಾಣೇಶಾಚಾರ್ಯರು ಮನೆಬಿಟ್ಟ ತಕ್ಷಣ ಉಳಿದ ಬ್ರಾಹ್ಮಣರ ಸಿಡುಕು ಮುಖಗಳನ್ನು ನೋಡಲು ಅಂಜಿ ಚಂದ್ರಿ ತೋಟಕ್ಕೆ ಹೋಗಿ ರಸಬಾಳೆ ಹಣ್ಣುಗಳನ್ನು ಕಟ್ಟಿಕೊಂಡು ಹೊಳೆಯಲ್ಲಿ ಸ್ನಾನಮಾಡಿ ಮಾರುತಿ ಗುಡಿಯ ಸ್ವಲ್ಪ ದೂರದಲ್ಲಿ ಒಂದು ಮರದ ಪಕ್ಕದಲ್ಲಿ ಕುಳಿತಳು. ದೇವರ ಪ್ರಸಾದಕ್ಕಾಗಿ ಕಾಯುತ್ತಕೂತ ಪ್ರಾಣೇಶಾಚಾರ್ಯರು ಕಂಗೆಟ್ಟರು ಸಂಸ್ಕಾರವಿಲ್ಲದೆ ಶವ ಕೊಳೆಯುತ್ತಿದೆ. ಮಾರುತಿ ಎಷ್ಟು ಹೊತ್ತು ನಿನ್ನ ಪರೀಕ್ಷೆ, ಎಂದು ಯಾಚಿಸಿದರು, ಮಾಡಬಾರದು ಎಂದು ನಿನ್ನ ಮತವಾದವರೆ ಎಡ ಪ್ರಸಾದವನಾದರೂ ದಯಮಾಡು ಎಂದು ಕಾಡಿ ಬೇಡಿದರು ಎಷ್ಟು ಹೊತ್ತು ಕೂತರು ಪರಿಹಾರ ಸಿಗದೆ ಕುಳಿತಿದ್ದ ಪ್ರಾಣೇಶಾಚಾರ್ಯರಿಗೆ ಹೆಂಡತಿಗೆ ಔಷದ ಕೊಡುವ ನೆನಪಾಗಿ ಎದ್ದು ನಿಂತು ನಿರಾಶೆಯಿಂದ ಗುಡಿಯಿಂದ ಮೆಲ್ಲಮೆಲ್ಲನೆ ನಡೆದರು. ಸ್ವಲ್ಪ ದೂರ ಬಂದಮೇಲೆ ದಟ್ಟವಾದ ಕತ್ತಲಿನ ಕಾಡಿನಲ್ಲಿ ಹಿಂದಿನಿಂದ ಚಂದ್ರಿಯ ಹೆಜ್ಜೆಯ ಸಪ್ಪಳಕೇಳಿ ನಿಂತರು ಯಾರು? ಎಂದರು. ಚಂದ್ರಿ ಸಣ್ಣಧ್ವನಿಯಲ್ಲಿ ಸಂಕೋಚದಿಂದ ನಾನು ಎಂದಳು. ಒಮ್ಮೆಲೆ ಕಾಡು ಕತ್ತಲಿನಲ್ಲಿ ಹೆಣ್ಣೊಂದು ಬಂದು ಬಳಿ ನಿಂತಿರುವುದು ಒಂದು ತರಹವಾಯಿತು. ಏನಾದರೂ ಅನ್ನಬೇಕೆಂದು ಮಾತು ಹುಡುಕಿ ತನ್ನ ಸ್ಥಿತಿಯನ್ನ ನೆನೆದು ಮಾರುತಿ ಮಾರುತಿ ಎನ್ನುತ್ತನಿಂತರು ಚಂದ್ರಿಗೆ ಅವರ ಮೃದುವಾದ ಗದ್ಗದಿತ ಧ್ವನಿಕೇಳಿ ತುಂಬ ಮರುಕ ಹುಟ್ಟಿತು ಪಾಪ ಹಸಿದು ಕಂಗೆಟ್ಟು ತನಗಾಗಿ ಒದ್ದಾಡಿ ಬಡವನಾಗಿದ್ದಾನೆ ಬ್ರಾಹ್ಮಣ ಅವರ

ಕಾಲನ್ನು ಭದ್ರವಾಗಿ ಹಿಡಿದು ನಮಸ್ಕಾರ ಮಾಡಬೇಕೆನಿಸಿತು. ಮರುಕ್ಷಣವೇ ಮುಂದೆ ಬಂದು ಬಿದ್ದಳು 'ಕತ್ತಲೆಯಲ್ಲಿ ಕಣ್ಣುಕಾಣಿಸದಿದ್ದರಿಂದ ಪಾದದ ಬದಲು ಅವರ ಮೊಣಕಾಲು ಅವಳ ಎದೆಗೆ ತಾಕಿತು. ಮುಗ್ಗರಿಸಿದ ವೇಗಕ್ಕೆ ಕೂಪ್ಪಸದ ಗುಂಡಿಗಳು ಹರಿದವು ಅವಕ್ಕಾಗಿ ಅವರ ತೊಡೆಯ ಮೇಲೆ ತಲೆಯಿಟ್ಟು ಕಾಲುಗಳನ್ನು ತಬ್ಬಿಕೊಂಡಳು. ಉಕ್ಕಿಬಂದ ಭಕ್ತಿ, ಹೆಣ್ಣಿನ ಸುಖವನ್ನೇ ಕಾಣದ ಬ್ರಾಹ್ಮಣ ಎನ್ನುವ ಮರುಕ, ಈ ಅಗ್ರಹಾರದಲ್ಲಿ ನೀವಲ್ಲದೆ ನನ್ನ ಹಿತ ಚಿಂತಕರು ಯಾರು ಇಲ್ಲ ಎನ್ನುವ ನಿಸ್ಸಹಾಯಕತೆ ಒಟ್ಟಿಗೆ ಕೂಡಿ ಅತ್ತಳು. ಪ್ರಾಣೇಶಾಚಾರ್ಯರಿಗೆ ಪಶ್ಚಾತ್ತಾಪ, ಥಟ್ಟನೇ ಪರಕೀಯಳಾದ ಯೌವನದ ಹೆಣ್ಣೊಬಳ ಬಿಗಿಯಾದ ಸ್ಪರ್ಶದಿಂದ ತಬ್ಬಿಬ್ಬೆನಿಸಿ ಆಶೀರ್ವದಿಸಲೆಂದು ಬಾಗಿ ಕೈ ನೀಡಿದರು ಚಾಚಿದ ಕೈಗೆ ಅವಳ ಬಿಸಿ ಉಸಿರು, ಕಣ್ಣೀರು ತಾಗಿ, ರೋಮಾಂಚದ ಮಾರ್ದವ ಉಕ್ಕಿ ಅವಳ ಚೆಲ್ಲಿದ ಕೂದಲನ್ನು ಸವರಿದರು. ತನ್ನ ತಲೆಗೂದಲಿನ ಮೇಲೆ ಅವರ ಕೈ ಆಡಿದ್ದರಿಂದ ಚಂದ್ರಿಗೆ ಇನ್ನಷ್ಟು ಆವೇಗವಾಗಿ ಅವರ ಕೈಗಳನ್ನು ಭದ್ರವಾಗಿ ಹಿಡಿದು ಎದ್ದುನಿಂತು ಪಾರಿವಾಳದ ಹಾಗೆ ಡವಗುಟ್ಟುತ್ತಿದ್ದ ತನ್ನ ಎದೆಗಳಿಗೆ ಒತ್ತಿಕೊಂಡಳು ತನ್ನ ಕೈಗಳೆಂದು ಸ್ಪರ್ಶಿಸದ ಪುಷ್ಟವಾದ ಅವಳ ಎದೆಗಳ ಮುಟ್ಟಿದ ತಕ್ಷಣ ಪ್ರಾಣೇಶಚಾರ್ಯರಿಗೆ ಜ್ಞಾನ ತಪ್ಪಿದಂತಾಯಿತು. ಕೂಡಲೇ ಚಂದ್ರಿ ಆಚಾರ್ಯರನ್ನು ತಬ್ಬಿಕೊಂಡು ಮೆತ್ತಗೆ ಕೂರಿಸಿದಳು. ಹೊಟ್ಟೆ ಹಸಿವಾಗಿದ್ದರಿಂದ ಅಮ್ಮ ಎಂದರು ಚಂದ್ರಿ ರಸಬಾಳೆ ಹಣ್ಣುಗಳನ್ನು ತೆಗೆದು ಸುಳಿದು ತಿನ್ನಿಸಿದಳು ನಂತರ ತನ್ನ ಸೀರೆಯನ್ನು ಬಿಚ್ಚಿ ಹಾಸಿ ಪ್ರಾಣೇಶಾಚಾರ್ಯರನ್ನು ತಬ್ಬಿಕೊಂಡು ಮಲಗಿ ಗಳಗಳನೆ ಅತ್ತು ಬಿಟ್ಟಳು. ಇದು ಪ್ರಾಣೇಶಾಚಾರ್ಯರ ಮತ್ತು ಚಂದ್ರಿಯರ ನಡುವಿನ ಆಕಸ್ಮಿಕ ಸಮಾಗಮದ ಸಂದರ್ಭ ಕಾದಂಬರಿಯ ಬೆಳವಣಿಗೆಯಲ್ಲಿ ಈ ಸಂದರ್ಭವೂ ಕಾರಣವಾಗಿದೆ ಇದು ಕಾದಂಬರಿಯ ಬೆಳವಣಿಗೆಯ ದಿಕ್ಕನ್ನೇ ಬದಲಾಯಿಸಿತು. ಶವಸಂಸ್ಕಾರದ ಪರಿಹಾರಕ್ಕಾಗಿ ಮಾರುತಿ ಗುಡಿಗೆ ಬಂದ ಪ್ರಾಣೇಶಾಚಾರ್ಯನೆ ಚಂದ್ರಿಯ ಜೊತೆಗಿನ ಆಕಸ್ಮಿಕವಾಗಿ ಸಂಭವಿಸಿದ ದೈಹಿಕ ಸಂಬಂಧದಿಂದಾಗಿ ಮಾನಸಿಕ ಸ್ಥಿತಿಗೆ ಬಳಗಾದಂತೆ ಆಗುತ್ತಾನೆ. ನಾನು ಅಗ್ರಹಾರದ ಬ್ರಾಹ್ಮಣರಿಗೆ ಏನು? ಹೇಳುವುದು ಹೇಳುವ ಅಧಿಕಾರವನ್ನು ಕಳೆದುಕೊಂಡೆ ಎಂದು ತತ್ತರಿಸಿ ನಿಂತನು. ನಾನು ಸೋತೆ ಮಾರುತಿಯ ಅಪ್ಪಣೆ ದೊರೆಯಲಿಲ್ಲ ನನಗೆ ಏನೂ ತಿಳಿಯದು ಈಗ ನೀವು ನಿಮ್ಮ ಮನಸ್ಸಿಗೆ ಅನ್ನಿಸಿದಂತೆ ಮಾಡಿ ಎಂದರು. ಮಾರ್ಗದರ್ಶನ ಮಾಡಬೇಕಾದ ಪ್ರಾಣೇಶಾಚಾರ್ಯರು ಹೀಗೆಂದ ಮೇಲೆ ಏನು ಮಾಡುವುದು ಎಂದು ಚಿಂತಿಸಿ ಮಠಕ್ಕೆ ಹೋಗಿ ಸ್ವಾಮಿಯವರನ್ನು ಕೇಳುವ ಎಂಬ ತೀರ್ಮಾನಕ್ಕೆ ಬಂದರು.

ಸಂಸ್ಕಾರ ಕಾದಂಬರಿಯಲ್ಲಿ ಪ್ರಾಣೇಶಾಚಾರ್ಯ ಮತ್ತು ಚಂದ್ರಿಯ ನಡುವಿನ ಸಂಬಂಧ ಆಕಸ್ಮಿಕವಾದರೂ. ಕಾದಂಬರಿಕಾರರು ತಂತ್ರವಾಗಿ ಇದನ್ನು ಬಳಸಿಕೊಂಡಿದ್ದಾರೆ. ಸಾಂಪ್ರದಾಯಿಕವಾದ ಆಚರಣೆ, ನಂಬಿಕೆಗಳನ್ನು ಮೀರಿದ್ದು ಮಾನವನ ಮನಸ್ಸು ಮತ್ತು ದೈಹಿಕವಾದ ಹಂಬಲ. ಇದು ಯಾವ ವ್ಯಕ್ತಿಯನ್ನು ಬಿಡುವುದಿಲ್ಲ ಜೊತೆಗೆ ಎಷ್ಟೇ ಸಂಪ್ರದಾಯ ಬದ್ಧವಾದ ವ್ಯಕ್ತಿಯಾಗಿದ್ದರೂ ಕಾಮನೆಗಳು. ಆತನನ್ನು ಬಿಡುವುದಿಲ್ಲ ಪ್ರಾಣೇಶಾಚಾರ್ಯರೇ ಹೇಳುವಂತೆ 1'ಕಾಮವನ್ನು ನಾನು ಬಿಟ್ಟರೂ ಕಾಮ ನನ್ನನ್ನೂ ಬಿಡಲಿಲ್ಲ'1 ಮಾನಸಿಕ ಹಾಗೂ ದೈಹಿಕವಾಗಿ ಸೋತುಹೋದ ಪ್ರಾಣೇಶಾಚಾರ್ಯರಿಗೆ ಚಂದ್ರಿಯ

1. ಸಂಸ್ಕಾರ –ಯು.ಆರ್.ಅನಂತಮೂರ್ತಿ, ಪುಟ–63, 2013

ಭೇಟಿ ಕಾದಂಬರಿಗೆ ಒಂದು ಹೊಸ ತಿರುವು ನೀಡುತ್ತದೆ ಹೆಂಡತಿಯ ಖಾಯಿಲೆಯಿಂದ ಲೈಂಗಿಕ ಸುಖದಿಂದ ವಂಚಿತರಾದ ಅವರಿಗೆ ಚಂದ್ರಿ ನೀಡಿದ ದೇಹ ಸುಖ ಆಪ್ಯಾಯಮಾನವಾಗುತ್ತದೆ. ಮಾನವನ ಅಗತ್ಯವಾದ 'ಹಸಿವು' ಮತ್ತು ಕಾಮತೃಷರಗಳಿಗೆ ಇಲ್ಲಿ ಹೇಗೆ ತೃಪ್ತಿ ದೊರಕಿತು ಎಂಬುದನ್ನು ಲೇಖಕರು ಸಾಂಕೇತಿಕವಾಗಿ ತಂದಿದ್ದಾರೆ. ಅವಳೊಡನೆ ಕೂಡಿದ ಪ್ರಾಣೇಶಚಾರ್ಯರಿಗೆ ಎಂದು ಕಾಣದ ಸುಖಾನುಭವವು ಅವರಲ್ಲಿ ಯಾವ ಪಾಪ ಪ್ರಜ್ಞೆಯನ್ನು ಮೂಡಿಸುವುದಿಲ್ಲ ಹಾಗೆಯೇ ಚಂದ್ರಿಗೂ ತಾನು ಅಪರಾಧ ಮಾಡುತ್ತಿರುವೆನೆಂದು ಭಾವನೆಯೂ ಮೂಡುವುದಿಲ್ಲ. ಇವರಿಬ್ಬರ ಮಿಲನ ಆ ಸಂದರ್ಭದಲ್ಲಿ ದೋಷರಹಿತವಾಗಿಯೇ ಕಾಣುತ್ತದೇ. ಚಂದ್ರಿಯ ಸಂಗದಿಂದ ಪ್ರಾಣೇಶಾಚಾರ್ಯರು ಬದುಕನ್ನು ನೋಡುವ ದೃಷ್ಟಿಯೇ ಬದಲಾಗುತ್ತದೆ. ಚಂದ್ರಿಯ ಸಹವಾಸದಿಂದ ಅಗ್ರಹಾರವನ್ನು ಬಿಟ್ಟು ದೂರ ಹೊಗಿ ಚಂದ್ರಿಯ ಜೊತೆಗೆ ಸಂಸಾರ ಹೂಡುವ ಆಸೆ ಮೂಡುವಷ್ಟು ಪ್ರಭಾವ ಬಿರುತ್ತದೆ. ಅವಳ ಸಂಬಂಧ ಹೊಂದಿ ಮನೆಗೆ ಬಂದಾಗ, ಹೆಂಡತಿ ಪ್ಲೇಗಿನಿಂದ ತೀರಿಕೊಂಡದ್ದು ಕಾದಂಬರಿಗೆ ಒಂದು ವಿಶೇಷವಾದ ಅರ್ಥಕೊಡುತ್ತದೆ. ಚಂದ್ರಿಯೊಡನೆ ಅನುಭವಿಸಿದ ಸುಖದಿಂದ ಅವರ ಬಾಳಿನಲ್ಲಿ ಅವರ ಹೆಂಡತಿಯ ಅವಶ್ಯಕತೆಯೇ ಇರುವುದಿಲ್ಲ. ಹೆಂಡತಿಯ ಸಾವಿನೊಡನೆ ಪ್ರಾಣೇಶಾಚಾರ್ಯರಿಗೆ ಒತ್ತಾಯ ಪೂರ್ವಕವಾಗಿ ಆಚರಿಸಿಕೊಂಡು ಬಂದಿದ್ದ ಸಂಯಮವೂ ನಾಶವಾಗುತ್ತದೆ. ಅಗ್ರಹಾರದ ಕಟ್ಟು-ನಿಟ್ಟಿನ ಸಂಪ್ರದಾಯಗಳ ಸಂಕೋಲೆಯಿಂದ ಬಿಡುಗಡೆ ಹೊಂದಿ ಹೊರಗಿನ ಸಮಾಜದ ಅನುಭವ ಪಡೆಯುವ ಅವಕಾಶ ಲಭಿಸುತ್ತದೆ. ಮಾಲೇರ ಪುಟ್ಟನ ಸಹವಾಸ ಹಾಗೂ ಆತನ ಮೂಲಕ ಪದ್ಮಾವತಿಯ ಪರಿಚಯವಾಗುತ್ತದೆ ಹೀಗೆ ಪ್ರಾಣೇಶಾಚಾರ್ಯರು ಬದುಕಿನ ದಿಕ್ಕನೇ ಬದಲಿಸುವ ಪಾತ್ರವಾಗಿ ಚಂದ್ರಿಯ ಪಾತ್ರ ಬರುತ್ತದೆ.

## ಅಲೆಮಾರಿ ಮಾಲೇರ ಪುಟ್ಟುವಿನ ಜೊತೆ ಪ್ರಾಣೇಶಾಚಾರ್ಯರ ಸಂಭಾಷಣೆ

ಪ್ರಾಣೇಶಾಚಾರ್ಯರು ತನ್ನ ಹೆಂಡತಿ ಪ್ಲೇಗಿನಿಂದ ಸತ್ತಮೇಲೆ ಅಗ್ರಹಾರದಲ್ಲಿ ಯಾರು ಇರುವುದಿಲ್ಲ ಹೆಂಡತಿಯ ಶವಸಂಸ್ಕಾರವಾದ ಮೇಲೆ ಅಗ್ರಹಾರಕ್ಕೆ ಮರಳಿ ಬರಲಿಲ್ಲ ಕಾಲುಕೊಂಡಲ್ಲಿಗೆ ನಡೆದುಬಿಡಬೇಕೆಂದು ಉಟ್ಟ ವಸ್ತ್ರದಲ್ಲಿಯೇ ಪೂರ್ವಾಭಿಮುಖವಾಗಿ ನಡೆದರು. ಕಾಡುದಾರಿಯಲ್ಲಿ ನಡೆದು ಹಲಸಿನ ಮರದ ಬುಡವೊಂದರಲ್ಲಿ ಕುಳಿತರು ಚಂದ್ರಿಯ ಜೊತೆಗಿನ ಸಂಬಂಧದ ಸನ್ನಿವೇಶವನ್ನು ಮತ್ತೋಮ್ಮೆ ನೆನಪಿಸಿಕೊಂಡರು. ಎಲ್ಲಾ ನೆನಪುಗಳು ಮರುಕಳಿಸಿ ಮತ್ತೆ ಚಂದ್ರಿಯನ್ನು ಅವಚಿಕೊಳ್ಳಬೇಕೆನಿಸಿತ್ತಿತ್ತು ಜೊತೆಯಲ್ಲಿ ಓದುತ್ತಿದ್ದ ಮಹಾಬಲನ ನೆನಪು ತಂದುಕೊಂಡು ನಡೆಯ ತೊಡಗಿದರು. ಕಾಡಿನಲ್ಲಿ ನಡೆಯುತ್ತಿದ್ದಂತೆ ಪ್ರಾಣೇಶಾಚಾರ್ಯರಿಗೆ ತನ್ನ ಬೆನ್ನ ಹಿಂದೆ ಯಾರೋ ಬರುತ್ತಿದ್ದಾರೆಂದು ಅನಿಸಿತು. ಹಿಂದುರಿಗಿ ನೋಡಿದಾಗ ತರುಣ ಬರುತ್ತಿದ್ದ. ತರುಣನಾಗಿದ್ದ ಅವನು 'ನಾನು ಮಾಲೇರ ಪುಟ್ಟ ಮೇಳಿಗೆಯ ರಥೋತ್ಸವಕ್ಕೆ ಹೊರಟವ ಎಂದು ಅವನಾಗಿಯೇ ಪ್ರಾರಂಭಿಸಿದ'. ನಿಮ್ಮನ್ನು ಬೆನ್ನ ಹಿಂದಿಂದ ನೋಡಿದೆ, ನಿಮ್ಮ ನಡಿಗೆಯ ಕ್ರಮದಿಂದ ಯಾರೋ

ಪರಿಚಯದವರೆಂದುಕೊಂಡೆ. ಈಗ ಮುಖ ನೋಡಿದರೆ ಎಲ್ಲೋ ಕಂಡಂತೆ ಅನ್ನಿಸುತ್ತೆ ಇದರಿಂದ ಪ್ರಾಣೇಶಾಚಾರ್ಯರಿಗೆ ಕಸಿವಿಸಿಯಾಯಿತು. ಪ್ರಾಣೇಶಾಚಾರ್ಯರು ನಾನು ಘಟ್ಟದ ಕೆಳಗಿನವ ಎಂದಾಗ ನನಗೂ ಘಟ್ಟದ ಕೆಳಗಿನ ಪರಿಚಯವಿದೆ ಅಲ್ಲೆ ನಮ್ಮ ಮಾವನ ಮನೆ ಹೀಗೆ ಪ್ರಾಣೇಶಾಚಾರ್ಯರಿಗೆ ಇಷ್ಟವಿಲ್ಲದಿದ್ದರೂ ಅವನೇ ಮಾತನ್ನು ಮುಂದುವರಿಸಿದ. ಈತ ಪ್ರಾರಬ್ಧದಂತೆ ಬೆನ್ನು ಹತ್ತಿದ್ದ ವಟವಟ ಎಂದು ಮಾತಾನಾಡುತ್ತಿದ್ದಾನೆ. ಮೆಟ್ಟಿಲ್ಲದೆ ಇಷ್ಟು ದೂರ ನಡೆಯುವುದು ಸರಿಯಲ್ಲ ಮೂರು ರೂಪಾಯಿಗೆ ತೀರ್ಥಹಳ್ಳಿಯಲ್ಲಿ ಕೈಯಲ್ಲಿ ಹೊಲಿದ ಜೋಡು ಸಿಗುತ್ತದೆ ಎಂದು ಹೇಳಿದ. ಸುಖ ಮುಖ್ಯವೋ? ದುಡ್ಡು ಮುಖ್ಯವೋ? ಎಂದು ಬೋಧಿಸಿದ. ಒಗಟು ಬಿಡಿಸಿ ಎಂದಾಗ ಮಾತಾನಾಡಿಸುತ್ತಲೇ ಇತ್ತಾ ಪ್ರಾಣೇಶಚಾರ್ಯರು ಮಾತನಾಡಲು ಆಸ್ಪದ ಕೊಡದಿದ್ದರೂ ಅವರ ಸಖ್ಯಕ್ಕಾಗಿ ಆತುಬಿದ್ದಿದ್ದಾನೆ, ಒಗಟು ಬಿಡಿಸಿ ಎಂದು ಒಗಟೊಂದನ್ನು ಹೇಳುತ್ತಾನೆ. ಅವನೇ ಅದಕ್ಕೆ ಉತ್ತರಕೊಟ್ಟ ಮತ್ತೆ ಒಗಟನ್ನು ಕೆಳುತ್ತಾ ಪ್ರಾಣೇಶಾಚಾರ್ಯರ ಸ್ನೇಹಕ್ಕೆ ಹತ್ತಿರವಾಗುತ್ತಾನೆ. ಸುಮಾರು ಮೂರು ಗಂಟೆಯ ಹೊತ್ತಿಗೆ ಪ್ರಾಣೇಶಾಚಾರ್ಯರು ಪುಟ್ಟನ ಜೊತೆ ಮೇಳಿಗೆಯ ಕೆರೆಯನ್ನು ತಲುಪಿದರು ಅಷ್ಟೊತ್ತಿಗೆ ಪುಟ್ಟ ತನ್ನ ವೈಕ್ತಿಕ ವಿಚಾರಗಳೆಲ್ಲವನ್ನು ಪ್ರಾಣೇಶಾಚಾರ್ಯರಿಗೆ ತಿಳಿಸಿದ್ದ ಪ್ರಾಣೇಶಾಚಾರ್ಯರ ಮನಸ್ಸಿನಲ್ಲಿ ಮೇಳಿಗೆಯಲ್ಲಿ ಯಾರಾದರೂ ಪರಿಚಯದವರ ಕಣ್ಣಿಗೆ ಬಿದ್ದು ಬಿಟ್ಟರೆ ಎಂಬ ಭಯ ಕೆರೆಯಲ್ಲಿ ಕೈಕಾಲುಗಳನ್ನು ತೊಳೆದುಕೊಂಡು ಒಂದು ಸಮಾಧನವೆಂದರೆ ಮೇಳಿಗೆಯಲ್ಲಿರುವವರೆಲ್ಲ ಸ್ಮಾರ್ತ ಬ್ರಾಹ್ಮಣರು ಆದ್ದರಿಂದ ಅಪರಿಚಿತರೆಂದು ಸ್ವಲ್ಪ ಸಮಾಧಾನವಾಯಿತು. ಚಂದ್ರಿಯ ಜೊತೆ ಸಂಬಂಧದಿಂದಾಗಿ ಬದುಕಿನಲ್ಲಿ ಒಂದು ನಿಶ್ಚಯಕ್ಕೆ ಬಂದಮೇಲೆ ಏಕೆ ಭಯಪಡಬೇಕು. ತನ್ನನ್ನು ನಾರಣಪ್ಪನ ಜೊತೆ ಹೋಲಿಸಿಕೊಂಡು 'ನಾರಣಪ್ಪ ಹೇಗೆ ರಾಜಾರೋಷವಾಗಿ ಚಂದ್ರಿಯ ಜೊತೆ ಅಗ್ರಹಾರದಲ್ಲಿ ಬಾಳ್ವೆನೆಡೆಸಿದ? ನಾನು ಚಂದ್ರಿಯನ್ನು ಸೇರಿದರೂ ಒಳಗೆ ಮುಖ ಮುಚ್ಚಿಕೊಂಡಿರುತ್ತೀನೋ?' ಎಂದು ತನ್ನ ಬಗ್ಗೆ ಅನಿಸಿತು.

ಮಾಲೇರ ಪುಟ್ಟ ನಾನು ಏಕೆ ನಿಮ್ಮ ಹತ್ತಿರ ಇಷ್ಟೆಲ್ಲ ಮಾತನಾಡುತ್ತಿದ್ದೇನೆ ಎಂದು ನಿಮಗೆ ಅನಿಸಿರಬಹುದು. ನಿಮ್ಮದು ಸಾಧುಸ್ವಭಾವ ನಾನು ನಿಮಗೆ ನಿಜ ಹೇಳುತ್ತೇನೆ. "ನಿಮ್ಮ ಜೊತೆ ಏಕೆ ಮುಚ್ಚುಮರೆ? ನಾನೇನು ಕಳಪೆ ಜನಾಂಗ ಅಂತ ನೀವು ತಿಳಿದುಕೊಂಡಿಲ್ಲವೆಂದು ಅಂದುಕೊಂಡಿದ್ದೇನೆ. ನಾನು ಮಾಲೇರರವ ಎಂದೆ ಅಲ್ಲವೆ? ಇನ್ನೂ ಬೇಕಾದರೆ ಹೇಳುವೆ ತನ್ನ ತಂದೆ ಪುಲೀನ ಬ್ರಾಹ್ಮಣರು ನನ್ನ ತಾಯಿಯನ್ನ ಇಟ್ಟುಕೊಂಡು ಹೆಂಡತಿಗಿಂತ ಚೆನ್ನಾಗಿ ನೋಡಿಕೊಂಡರು ನನಗೆ ಮುಂಜಿಯನ್ನು ಮಾಡಿಸಿದರು ನೋಡಿ ಬೇಕಾದರೆ ಎಂದು ಜನಿವಾರವನ್ನು ಅಂಗಿಯ ಒಳಗಿನಿಂದ ಎಳೆದು ತೋರಿಸಿದ. ನನಗೆ ಇರುವ ಸ್ನೇಹಿತರೆಲ್ಲ ಬ್ರಾಹ್ಮಣರೆ ಎಂದು ಹೇಳಿ ನಡೆಯಿರಿ ಜಾತ್ರೆಗೆ ಹೋಗುವ ಎಂದು ಕರೆದುಕೊಂಡು ಹೋದನು.

ಜಾತ್ರೆಯ ಗಡಿಬಿಡಿಯಲ್ಲಿ ಮೇಳಿಗೆಗೆ ಕಳೆಬಂದಿತ್ತು ಗದ್ದಲದ, ಸಂಭ್ರಮದಲ್ಲಿ ಬಲೂನು, ಪೀಪೀ, ಮಿಠಾಯಿ, ಕ್ರಶ್ಚಿನ ಶಬ್ಧ, ದೇವಸ್ಥಾನದ ಘಂಟೆಗಳ ನಾದ, ಹೆಂಗಸರ ಬಳೆಯ ಅಂಗಡಿಯ ವೈಭವದ ನಡುವೆ ಸಂಭ್ರಮಿತರಂತೆ ಪ್ರಾಣೇಶಾಚಾರ್ಯರು ಪುಟ್ಟನನ್ನು ಅನುಸರಿಸಿ ನಡೆದರು. ರಾತ್ರಿ ಆದ ಮೇಲೆ ಪುಟ್ಟು ಪ್ರಾಣೇಶಾಚ್ಯರರಿಗೆ ಯಾವ ಕಡೆಗೆ ಪ್ರಯಾಣ ಎಂದಾಗ ಇನ್ನೂ ನಿಶ್ಚಿತವಿಲ್ಲ ಎಂದರು. ಅಷ್ಟುದೂರ ನಿಮ್ಮನ್ನು ಕಳಿಸಿಬರುವೆ ದೇವಸ್ಥಾನದಲ್ಲಿ ಊಟ ಮಾಡಬಹುದಲ್ಲ ಎಂದು ಒತ್ತಾಯ ಮಾಡಿದನು ನಾನೊಬ್ಬ ಸೋನೆಗಾರನನ್ನು ನೋಡಬೇಕು ಎಂದರು. ಏಕೆ ಎಂದು ಕೇಳಿದಾಗ ನನ್ನ ಒಂದು ಬಂಗಾರದ ಚೂರನ್ನು ಮಾರುವುದಿದೆ ಅಂದಮೇಲೆ 'ಕೈಲಿ ಕಾಸು ಖರ್ಚಿಗಿಲ್ಲದ್ದಿರೆ ಈ ಹನ್ನೆರಡಣೆ ತಗ್ಗೋಳಿ, ಕೈವಾಡವಾಗಿ ಇನ್ನೊಮ್ಮೆ ಕೊಡುವಿರಂತೆ ಎಂದು ಹೇಳಿದನು. ಇದು ಸಾಕಾಗುವುದಿಲ್ಲ ಕುಂದಾಪುರಕ್ಕೆ ಬಸ್ಸು ಹಿಡಿಯಬೇಕು ಮತ್ತು ಖರ್ಚಿನ ಬಾಬತ್ತು ಎಂದರು? ಯಜ್ಞೋಪವೀತವಾದ ಉಂಗುರವನ್ನು ಕೊಟ್ಟು ಹತ್ತು ರೂಪಾಯಿಯನ್ನು ಪಡೆದರು. ನಂತರ ಪುಟ್ಟುವಿನ ಜೊತೆಯಲ್ಲಿ ಪದ್ಮಾವತಿಯ ಮನೆಗೆ ಬಂದರು. ಪುಟ್ಟು ಇಲ್ಲಿಗೇಕೆ ಕರೆತಂದಿದ್ದಾನೆಂದು ಪ್ರಾಣೇಶಾಚಾರ್ಯರಿಗೆ ಅರ್ಥವಾಯಿತು. ಮಾರುತಿ ಕೈಕೊಟ್ಟುಬಿಟ್ಟ ಮಹಾಬಲ ಮೋಸಮಡಿದ ನಾರಣಪ್ಪ ರಚ್ಚು ತೀರಿಸಿಕೊಂಡ, ಬ್ರಾಹ್ಮಣರು ಬಂಗಾರಕ್ಕಾಗಿ ಆಸೆಪಟ್ಟರು 'ಚಂದ್ರಿ ಕತ್ತಲಲ್ಲಿ ನಿಂತಳು – ಕೊಟ್ಟಳು – ನಡೆದುಬಿಟ್ಟಳು. ಭಾಗೀರತಿ ಚೀರಿ ಸತ್ತಳು ಹೀಗೆ ಮನಸ್ಸಿನಲ್ಲಿ ಅಂದುಕೊಂಡರು. ರಾತ್ರಿ ದೇವಸ್ಥಾನದಲ್ಲಿ ಊಟ ಮಾಡಿಕೊಂಡು ಬರುವ ಎಂದು ಪುಟ್ಟು ಕರೆದುಕೊಂಡು ಹೋದನು. ಊಟಕ್ಕೆ ಕುಳಿತಾಗ ಊಟ ಬಡಿಸುತ್ತಿದ್ದವ ಅವನನ್ನು ನೋಡಿದ ರೀತಿಯಿಂದ ಭಯವಾಯಿತು. ಈ ಭಯದಿಂದ ಪಾರಗಬೇಕೆಂಧು ಪಂಕ್ತಿಯಿಂದ ಎದ್ದೆ ನಡೆದ, ಪುಟ್ಟ ಆಚಾರ್ಯರೆ, ಆಚಾರ್ಯರೆ ಎಂದು ಬಂದು ಜೊತೆಗೂಡಿದ ನಾನು ನಿಮ್ಮ ಜೊತೆ ನಾಳೆ ಕುಂದಾಪುರಕ್ಕೆ ಬರುತ್ತೇನೆಂದು ಹೇಳಿದ. ಇಲ್ಲ ನಾನು ಈ ಕ್ಷಣವೇ ದೂರ್ವಾಸಪುರಕ್ಕೆ ಹೋಗಬೇಕು. ನನ್ನ ಸೋದರ ಅಲ್ಲಿ ಸಕತ್ ಖಾಯಿಲೆಯಾಗಿ ಮಲಗಿದ್ದಾನೆಂದು ಸುದ್ದಿ ತಿಳಿಯಿತು. ನಾನು ಬೇಗ ಹೋಗಬೇಕು ಅಂದರು. ನಾರಣಪ್ಪ ಪದ್ಮಾವತಿಯ ಸಲುವಾಗಿ ಹೇಗೆ ಪುಟ್ಟನ ಜೊತೆ ಸ್ನೇಹ ಮಾಡಿದರೆಂಬ ವಿಷಯ ತಿಳಿದು ಅವನಿಂದ ಬಿಡಿಸಿಕೊಂಡು ಗಾಡಿಯನ್ನು ಹತ್ತಿ ತಮ್ಮೂರಿನತ್ತ ಹೊರಟರು.

ಪ್ರಾಣೇಶಾಚಾರ್ಯ ಮತ್ತು ಪುಟ್ಟವಿನ ನಡುವಿನ ಸಂಭಾಷಣೆ ಕಾದಂಬರಿಯಲ್ಲಿ ಮುಖ್ಯವಾದ ಪ್ರಸಂಗವಾಗಿದೆ ಮೇಳಿಗೆಯ ಜಾತ್ರೆಗೆ ಹೊರಟ್ಟಿದ್ದ ಪುಟ್ಟ ಆಕಸ್ಮಿಕವಾಗಿ ಪ್ರಾಣೇಶಾಚಾರ್ಯರಿಗೆ ಸಿಗುವುದು. ಅವರು ಮೌನವಾಗಿದ್ದರು ಪುಟ್ಟನೆ ಮಾತನಾಡುತ್ತಲೇ ಇರುವುದು. ಜಾತ್ರೆಯಲ್ಲಿ ಅವರಿಬ್ಬರ ಓಡಾಟ. ಪದ್ಮಾವತಿಯ ಪರಿಚಯ. ಆ ಮೂಲಕ ಪ್ರಾಣೇಶಾಚಾರ್ಯರ ಮನಸ್ಥಿತಿಯನ್ನು ಮತ್ತೊಮ್ಮೆ ಕಲಕಿದ ಸಂದರ್ಭ, ನಾರಣಪ್ಪ ಮತ್ತು ಪದ್ಮಾವತಿಯರ ಸಂಬಂಧದ ವಿಷಯ ದೇವಸ್ಥಾನದಲ್ಲಿ ಊಟ ಮಾಡುವಾಗ ಅನುಭವಿಸಿದ ಭಯ ಮುಂತಾದ ಅಂಶಗಳು ಪ್ರಾಣೇಶಾಚಾರ್ಯರ ವ್ಯಕ್ತಿತ್ವವನ್ನು ಅನಾವರಣಗೊಳಿಸುತ್ತದೆ.

## ಅಗ್ರಹಾರದ ಬ್ರಾಹ್ಮಣರ ಧರ್ಮ ಮತ್ತು ನಂಬಿಕೆಗಳ ಚಿತ್ರಣ

ಸಂಸ್ಕಾರ ಕಾದಂಬರಿಯು ಸನಾತನ ಧರ್ಮದ ಮತ್ತು ಸಾಂಪ್ರದಾಯಿಕ ನಂಬಿಕೆಗಳನ್ನು ತಿಳಿಸುವ ಕಾದಂಬರಿಯಾಗಿದ್ದು ಇಡೀ ಅಗ್ರಹಾರದ ಬ್ರಾಹ್ಮಣರ ಮನೋಭಾವ, ಧಾರ್ಮಿಕ ಆಚರಣೆಗಳು ಮತ್ತು ನಂಬಿಕೆಗಳು ಕಾದಂಬರಿಯಲ್ಲಿ ಮುಖ್ಯವಾಗಿ ಕಂಡು ಬರುತ್ತದೆ. ಕಥಾನಾಯಕನಾದ ಪ್ರಾಣೇಶಾಚಾರ್ಯನು ಪ್ರತಿನಿತ್ಯವೂ ಇಪ್ಪತ್ತು ವರ್ಷಗಳಿಂದಲು ನಸುಕಿನಲ್ಲಿ ಸ್ನಾನ, ಸಂಧ್ಯಾವಂದನೆ, ಹೊಳೆದಾಟಿ ಹೋಗಿ ಗುಡಿಯ ಮಾರುತಿಯ ಪೂಜೆ ಮತ್ತು ಪುರಾಣ ಪುಣ್ಯಕತೆಗಳ ವಾಚನ, ಪುರಾಣ ಮತ್ತು ಧರ್ಮಗಳ ಅಧ್ಯಯನ ಮಾಡುತ್ತ ಬ್ರಾಹ್ಮತ್ವದಲ್ಲಿ ತತ್ವನಿಷ್ಠೆಯನ್ನು ಹೊಂದಿದ್ದನು. ಇಡೀ ಅಗ್ರಹಾರದ ಬ್ರಾಹ್ಮಣರಿಗೆಲ್ಲ ಧರ್ಮ ಮತ್ತು ಸಾಂಪ್ರದಾಯಿಕ ನಂಬಿಕೆಯನ್ನು ಹೊಂದಿದ್ದರು. ನಾರಣಪ್ಪ ಬ್ರಾಹ್ಮಣನಾದರೂ ಇಡೀ ಅಗ್ರಹಾರದ ಬ್ರಾಹ್ಮಣರೆಲ್ಲಾ ಭಿನ್ನ ವ್ಯಕ್ತಿತ್ವ ಹೊಂದಿದ್ದು. ಅವನ ಸಾವಿನಿಂದಾಗಿ ಶವ ಸಂಸ್ಕಾರವನ್ನು ಯಾರು ಮಾಡಬೇಕೆಂದು ವಿಚಾರವಾಗಿ ಎದ್ದಂತಹ ಸಮಸ್ಯೆಯಿಂದ ಸಂಪ್ರದಾಯ ಬದ್ಧ ಬ್ರಾಹ್ಮಣರೆಲ್ಲರು ಪ್ರಾಣೇಶಾಚಾರ್ಯರ ಬಳಿಗೆ ಬಂದು ಚರ್ಚಿಸುವಾಗ ಪ್ರತಿಯೊಬ್ಬ ಬ್ರಾಹ್ಮಣನೂ ಧರ್ಮದ ಸೂಕ್ಷ್ಮ ವಿಚಾರವಾಗಿ ಮಾತನಾಡುತ್ತಾರೆ. ನಾರಣಪ್ಪನ ಸಾವಿನಿಂದಾಗಿ ಇಡೀ ಅಗ್ರಹಾರದ ಜನರು ಶವಸಂಸ್ಕಾರವಾಗದ ಹೊರತು ಯಾರು ಊಟ ಮಾಡುವಂತಿಲ್ಲ. ಆದರೆ ಯಾರು? ಶವ ಸಂಸ್ಕಾರ ಮಾಡಬೇಕೆನ್ನುವ ಪ್ರಶ್ನೆ ಉದ್ಭವಿಸಿ ನಾರಣಪ್ಪನ ಸಂಬಂಧಿಯಾದ ಗರುಡಚಾರ್ಯನನ್ನು ಮಾಡುವಂತೆ ತಿಳಿಸಿದಾಗ ಅವನಿಗೂ ನಾರಣಪ್ಪನಿಗೂ ಆಣೆ ಭಾಷೆಯಾಗಿ ಸಂಬಂಧ ಮುರಿದು ಬಿದ್ದಿದ್ದರಿಂದ ಶವಸಂಸ್ಕಾರಕ್ಕೆ ಆತ ಒಪ್ಪುವುದಿಲ್ಲ ಇನ್ನೂ ಅಗ್ರಹಾರದಲ್ಲಿ ಮಕ್ಕಳನ್ನು ಬಿಟ್ಟರೆ ಯಾರು ಊಟ ಮಾಡುವಂತಿಲ್ಲ ಅಗ್ರಹಾರದ ಎಲ್ಲರಲ್ಲೂ ಒಂದು ರೀತಿಯ ಅವ್ಯಕ್ತ, ಅಪರಿಚಿತ ಭೀತಿ, ಕಳವಳ ಹುಟ್ಟಿತು. "ಬದುಕಿನಲ್ಲಿ ವೈರಿ, ಸತ್ತು ಅನ್ನ ಕಂಟಕ ಶವವಾಗಿ ಇನ್ನೂ ಸಮಸ್ಯೆ" ಎಂದು ಶಪಿಸುತ್ತಾರೆ. ಈತನ ಶವಸಂಸ್ಕಾರ ಮಾಡಿದರೆ ನಾಳೆ ಗುರುಗಳು ಬಹಿಸ್ಕಾರ ಹಾಕಿದರೆ ಗತಿ ಏನು ಎಂಬ ಭಯ ಎಲ್ಲರಲ್ಲೂ ಇದೆ. ನಂತರ ಮಂಜಯ್ಯನ ಬಳಿಗೆ ಹೋಗುವುದು ನಾರಣಪ್ಪನ ಶವ ಸಂಸ್ಕಾರಕ್ಕೆ ಸಹಾಯ ಕೇಳುವುದು, ಪ್ರಾಣೇಶಾಚಾರ್ಯರು ಗುಡಿಯ ಮಾರುತಿಯಲ್ಲಿ ಪರಿಹಾರ ಕೇಳಲು ಹೋಗುವುದು, ಇಡೀ ಅಗ್ರಹಾರಕ್ಕೆ ಪ್ಲೇಗ್‌ರೋಗ ಹರಡಿ ಇಲಿ, ಹೆಗ್ಗಣಗಳ ಓಡಾಟ ಇದಕ್ಕೆ ಕಾರಣ ನಾರಣಪ್ಪನ ಶವಸಂಸ್ಕಾರ ಮಾಡದೇ ಇರುವುದೇ ಎಂಬ ಭೀತಿ ಎಲ್ಲರಲ್ಲೂ ಉಂಟಾಗಿ ಇಡೀ ಅಗ್ರಹಾರವನ್ನೇ ಬಿಡಬೇಕಾದ ಸನ್ನಿವೇಶ ಅಗ್ರಹರದಲ್ಲಿ ಸಾವಿನ ಸಂಖ್ಯೆ ಹೆಚ್ಚಾದಂತೆ ನಾರಣಪ್ಪನ ಶವಸಂಸ್ಕಾರ ಮಾಡದೇ ಇರುವುದೇ ಇದಕ್ಕೆ ಕಾರಣವೆಂದು ನಂಬಿಕೊಂಡರು. ಬ್ರಾಹ್ಮಣ್ಯವನ್ನು ನಾರಣಪ್ಪ ಬಿಟ್ಟರು ಬ್ರಾಹ್ಮಣತ್ವ ಆತನನ್ನು ಬಿಡಲಿಲ್ಲ, ಕೆಳಜಾತಿಯ ಹೆಂಗಸಿನ ಸಹವಾಸ ಮಾಡಿದರೂ ಧರ್ಮವೇನು ಕೆಟ್ಟಿಲ್ಲ. ಇದು ಧರ್ಮದ ವಿಚಾರವಲ್ಲ ಕಾಮದ ವಿಚಾರವೆಂದು ಪ್ರಸ್ತಾಪಿಸುವ ಸನ್ನಿವೇಶದಲ್ಲಿ ಧರ್ಮದ ಒಳಸೂಕ್ಷ್ಮತೆ ಮತ್ತು ಅಗ್ರಹಾರದ ಬ್ರಾಹ್ಮಣರಲ್ಲಿ ಇರುವ ನಂಬಿಕೆಯನ್ನು ವ್ಯಕ್ತಪಡಿಸುತ್ತದೆ. ನಾರಣಪ್ಪನ ಧರ್ಮವಿರೋಧದ

ನಡವಳಿಕೆ ಹಾಗೂ ಸಂಪ್ರದಾಯದ ವಿರುದ್ಧದ ಆಚರಣೆಗಳಿಂದಾಗಿ ಬ್ರಾಹ್ಮಣರಿಗ ಈತ ಕಂಟಕವಾಗಿದ್ದ. ನಾರಣಪ್ಪನಿಗೆ ಬ್ರಾಹ್ಮಣರು ಬಹಿಷ್ಕಾರ ಹಾಕಿರಲಿಲ್ಲ ಶಾಸ್ತ್ರ ರೀತಿಯಲ್ಲಿ ಅವನು ಬಹಿಷ್ಕೃತನಾಗದೆ ಸತ್ತದ್ದರಿಂದ ಅವನು ಬ್ರಾಹ್ಮಣನಾಗಿಯೇ ಸತ್ತಂತೆ ಹಾಗೆ ನೋಡಿದರೆ ಬ್ರಾಹ್ಮಣರಲ್ಲದವರಿಗೆ ಈತನ ಶವವನ್ನು ಮುಟ್ಟುವ ಅಧಿಕಾರ ಇಲ್ಲ ಮುಟ್ಟಿದರೆ ಆಗಲೂ ಬ್ರಾಹ್ಮಣತ್ವಕ್ಕೆ ವಂಚನೆ ಬರುತ್ತದೆ. ಇಂತಹ ಧರ್ಮದ ಜಿಜ್ಞಾಸೆಯಲ್ಲಿಯೇ ಅಗ್ರಹಾರದ ಬ್ರಾಹ್ಮಣರೆಲ್ಲರು ತೊಡಗುತ್ತಾರೆ.

ಪಾರಿಜಾತಪುರದ ಬೇರೆ ಬ್ರಾಹ್ಮಣರಿಂದ ಬೊಜ್ಜ ಮಾಡಿಸಬಹುದೆಂಬ ವಿಚಾರದಿಂದ ಮಂಜಯ್ಯನನ್ನ ಕಂಡು ವಿಚಾರಮುಟ್ಟಿಸಿ ಶವಸಂಸ್ಕಾರ ಮಾಡುವಂತೆ ಕೇಳಿಕೊಳ್ಳುತ್ತಾರೆ. ಪಾರಿಜಾತಪುರದ ಬ್ರಾಹ್ಮಣರಿಗೂ ನಾರಣಪ್ಪನಿಗೂ ಸ್ನೇಹವಿದ್ದು ಮತ್ತು ಪರಸ್ಪರ ಊಟ-ಉಪಚಾರಗಳು ಇದ್ದವೂ ಆದರೆ ಅವರು ಅಡ್ಡ ಪಂಕ್ತಿಯ ಸ್ಮಾರ್ತ ಬ್ರಾಹ್ಮಣರು ಮಾಧ್ವರ ಹಾಗೆ ಕಟ್ಟುನಿಟ್ಟಿನ ನಿಯಮಗಳಿಲ್ಲ ಅವರು ಅಗ್ರಹಾರದ ಬ್ರಾಹ್ಮಣರ ಆಚರಣೆ ನಂಬಿಕೆಗಳಂತೆ ನಿಯಮಗಳು ಕಟ್ಟುನಿಟ್ಟಿನವಲ್ಲ. ಅವುಗಳಲ್ಲಿ ಸಡಿಲಿಕೆ ಉಂಟು ಆದರೂ ಅವರಿಂದ ಶವ ಸಂಸ್ಕಾರ ಮಾಡಿಸಲು ಮುಂದಾಗುತ್ತಾರೆ. ಆದರೆ ಪಾರಿಜಾತಪುರದ ಬ್ರಾಹ್ಮಣರು ನಾವು ದುಡುಕುವುದಿಲ್ಲ ಮೊದಲೇ ಕೀಳೆಂದು ಜರಿಸಿಕೊಂಡು ನಮ್ಮವರು ಈ ಕೃತ್ಯವನ್ನು ಮಾಡಿದರೆ ಇನ್ನಷ್ಟು ಅಪಕೀರ್ತಿ ಬರುತ್ತದೆ. ನಿಮ್ಮ ಪ್ರಾಣೇಶಾಚಾರ್ಯರು ಅಪದ್ಧರ್ಮವೇನು? ಧರ್ಮಸೂಕ್ಷ್ಮವೇನು? ಎಂಬುದನ್ನು ತಿಳಿದು ಹೇಳಲಿ ಆಗ ಬೇಕಾದರೆ ನಾವು ಖಂಡಿತ ನಾರಣಪ್ಪನ ಶವಸಂಸ್ಕಾರ, ಮಾಡುತ್ತೇವೆಂದು ಹೇಳಿದರು. ಇಲ್ಲೂ ಕೂಡ ಧಾರ್ಮಿಕ ನಂಬಿಕೆಗಳು ಯಾವ ರೀತಿಯ ಮಾನವನ ಬದುಕಿನಲ್ಲಿ ಹಾಸುಹೊಕ್ಕಾಗಿ ಎಣೆದುಕೊಂಡಿವೆ ಎಂಬುದನ್ನು ನೋಡಬಹುದು. ಗರುಡಾಚಾರ್ಯರ ಒಬ್ಬನೇ ಮಗ, ಶ್ಯಾಮ ಮನೆಯಿಂದ ಓಡಿಹೋಗಿ ಮಿಲಿಟರಿ ಸೇರಿದ್ದು ಚಾಂಡಾಲ ನಾರಣಪ್ಪನ ಪ್ರೇರಣೆಯಿಂದಲೇ. ಕೈಗೆ ಬಂದ ಮಗ ಕೆಟ್ಟುಹೋದ ಎಂದು ತಾಯಿ ಸೀತಾದೇವಿ ನಾರಣಪ್ಪನನ್ನು ಬೈದಳು ಪುಣೆಯಿಂದ ಮಗನ ಕಾಗದ ಬರೆದ ಮೇಲೆ – ಈ ಕಡೆಯಿಂದ 'ಮಾಂಸಹಾರ ಮಾಡಬೇಡ', ಸ್ನಾನ ಸಂಧ್ಯಾವಂದನೆ ಬಿಡಬೇಡ ಎಂದು ಕಾಗದ ಬರೆಸಿದ್ದಳು. ಪ್ರತಿವಾರ ಒಪ್ಪತ್ತು ಮಾಡತೊಡಗಿದಳು ಮನೆಗೆ ಬಂದ ಗರುಡಾಚಾರ್ಯನು ಚಂದ್ರಿಯ ಆಭರಣ ನಮಗೆ ಸೇರಿದ್ದೇ, ಆದ್ದರಿಂದ ಮಗನನ್ನು ಮಿಲಿಟರಿಯಿಂದ ಬಿಡಿಸಿಕೊಳ್ಳಲು ಒಂದು ಮಾರ್ಗವೆಂದು ಹಿಗ್ಗಿದಳು. ನಾರಣಪ್ಪನ ಶವಸಂಸ್ಕಾರ ಗಂಡನೇ ಮಾಡುವಂತಾಗಲಿ ಎಂದು ದೇವರಲ್ಲಿ ಹರಕೆ ಹೊತ್ತಳು. ಈಗೆ ನಾರಣಪ್ಪನ ಸಾವಿನ ಹಿನ್ನೆಲೆಯಲ್ಲಿ ಎಲ್ಲಾ ಬ್ರಾಹ್ಮಣರು ಧರ್ಮಸೂಕ್ಷ್ಮತೆಗೆ ಬದ್ಧರಾಗಿ, ನಂಬಿಕೆ, ಸಂಪ್ರದಾಯಗಳು ಅವರ ಬದುಕಿನ ಅವಿಭಾಜ್ಯ ಅಂಗವಾಗಿ ನಡೆದುಕೊಳ್ಳುವ ರೀತಿಯನ್ನು ಕಾದಂಬರಿಯಲ್ಲಿ ಕಾಣಬಹುದು.

## ವಂಶವೃಕ್ಷ ಕಾದಂಬರಿಯಲ್ಲಿನ ಪ್ರಮುಖ ಸನ್ನಿವೇಶಗಳು

ಯಾವುದೇ ಒಂದು ಸಾಹಿತ್ಯ ಕೃತಿಯ ಬೆಳವಣಿಗೆಗೆ ಸನ್ನಿವೇಶಗಳೆ ಕಾರಣ ಕೃತಿಯಲ್ಲಿ ಹತ್ತಾರು ಸನ್ನಿವೇಶಗಳು, ಆಕಸ್ಮಿಕ ಘಟನೆಗಳು ಕೃತಿಯ ಬೆಳವಣಿಗೆಗೆ ಕಾರಣವಾಗುತ್ತವೆ. ಸಂಸ್ಕಾರ ಕಾದಂಬರಿಯಲ್ಲಿ ಬರುವ ಪ್ರಮುಖ ಸನ್ನಿವೇಶಗಳಂತೆ ವಂಶವೃಕ್ಷ ಕಾದಂಬರಿಯ ಕೆಲವು ಸನ್ನಿವೇಶಗಳು ಕಾದಂಬರಿಯನ್ನು ಬೆಳೆಸಿರುವುದನ್ನು ಕಾಣಬಹುದು ಅಂತಹ ಪ್ರಮುಖ ಘಟನೆಗಳೆಂದರೆ.

### ಶ್ರೀನಿವಾಸ ಶ್ರೋತ್ರಿಯವರು ಮಗ ನಂಜುಂಡಶ್ರೋತ್ರಿಯ ಸಾವು

ವಂಶವೃಕ್ಷ ಕಾದಂಬರಿಯಲ್ಲಿ ಬರುವ ಪ್ರಮುಖ ಸನ್ನಿವೇಶಗಳಲ್ಲಿ ಒಂದು ಶ್ರೀನಿವಾಸ ಶ್ರೋತ್ರಿಯವರ ಮಗ ನಂಜುಂಡಶ್ರೋತ್ರಿಯ ಕಳೆದುಕೊಂಡದ್ದು. ಕಾದಂಬರಿ ಪ್ರಾರಂಭದಲ್ಲಿ ಕಪಿಲಾ ನದಿಯು ಪ್ರವಾಹ ತುಂಬಿ ಹರಿಯುವ ಸನ್ನಿವೇಶದೊಂದಿಗೆ ಆರಂಭವಾಗುತ್ತದೆ. ಶ್ರೀನಿವಾಸಶ್ರೋತ್ರಿಯವರು ತಮ್ಮ ಪೂರ್ವಿಕರು ಕಟ್ಟಿಸಿದ್ದ ಮನೆಯಲ್ಲಿಯೇ ವಾಸವಾಗಿದ್ದರು. ಕಪಿಲ ನದಿಯ ಪ್ರವಾಹ ಬಂದಾಗ ಶ್ರೋತ್ರಿಯವರ ಮನೆಯಲ್ಲೂ ಹೆಜ್ಜೆ ಮುಳುಗುವಷ್ಟು ನೀರು ಊರಿನವರೆಲ್ಲ ನದಿಯನ್ನು ಬೈದರೂ ಶ್ರೋತ್ರಿಯವರು ಮಾತ್ರ ಬೈಯಲಿಲ್ಲ. ಮನೆಯ ಹೊಸಲಿನ ಹತ್ತಿರವೇ ಮುಳುಗಿ ಸ್ನಾನ ಮಾಡಿದರು ಮನೆಯನ್ನು ಬಿಟ್ಟು ಹೋಗುವ ಎಂದು ಹೆಂಡತಿ ಭಾಗೀರತಮ್ಮ, ಮನೆಯ ಆಳು ಲಕ್ಷ್ಮಿ, ಎಂಟುವರ್ಷದ ನಂಜುಂಡಶ್ರೋತ್ರಿ ಈ ಮೂವರು ಹೇಳಿದರೂ ಕೇಳಲಿಲ್ಲ. ಅದೇ ಮನೆಯಲ್ಲಿ ವಾಸವಿದ್ದರು ಪ್ರವಾಹ ಇಳಿಯಿತು ಶಾಂತವಾಗಿ ನದಿಯ ಚಲನೆಯಾ ಸಾಮಾನ್ಯಸ್ಥಿತಿಗೆ ಇಳಿಯಿತು. ನದಿಯ ಪ್ರವಾಹ ಪ್ರತಿವರ್ಷ ಜೇಷ್ಠ ಆಷಾಢದಲ್ಲಿ ವರ್ಷಕ್ಕೊಮ್ಮೆ ದ್ರುತವನ್ನು ಮುಟ್ಟುವುದು, ಉಳಿದ ಕಾಲದಲ್ಲಿ ಶಾಂತವಾಗಿ ಹರಿಯುತ್ತಿತ್ತು.

ಕೆಲವು ವರ್ಷಗಳು ಕಳೆದವು ಶ್ರೀನಿವಾಸಶ್ರೋತ್ರಿಯವರ ಮಗ ನಂಜುಂಡಶ್ರೋತ್ರಿಯು ಬೆಳೆದು ದೊಡ್ಡವನಾದನು ಮೈಸೂರಿನಲ್ಲಿ ಕಾಲೇಜಿಗೆ ಸೇರಿ ಶಿಕ್ಷಣವನ್ನ ಆರಂಭಿಸಿದ ತಂದೆ-ತಾಯಿಯರಿಗೆ ಮೆಚ್ಚುಗೆಯಾದ ಕಾತ್ಯಾಯಿನಿಯೊಡನೆ ಮದುವೆಯೂ ಆಯಿತು. ಒಂದು ಗಂಡು ಮಗುವಾಯಿತು ಆ ಮಗುವಿಗೆ ಆರು ತಿಂಗಳು ಇರುವಾಗ ಜ್ಯೇಷ್ಠಮಾಸದಲ್ಲಿ ಕಪಿಲೆ ನದಿಯ ಪ್ರವಾಹಕ್ಕೆ ಸಿಕ್ಕಿ ಸತ್ತುಹೋದ ನಂಜುಂಡಶ್ರೋತ್ರಿ ಈಜು ಬಾರದವನಲ್ಲ. ಪ್ರವಾಹದ ಸೆಳೆತದಲ್ಲಿ ಕೈ ಸೋಲುಬರುವಂತಹ ದುರ್ಬಲ ತೋಳಿನ ಯುವಕನೂ ಅಲ್ಲ, ಎತ್ತರವಾದ ಆಳು, ಅಜಾನುಬಾಹು, ಉಕ್ಕಿ ಹರಿಯುತ್ತಿದ್ದ ನದಿಯಲ್ಲಿ ಈಜಲು ಹೋಗಿರಲಿಲ್ಲ ಮಣಿಕರ್ಣಿಕ ಘಟ್ಟದಲ್ಲಿ ಎಚ್ಚರವಾಗಿಯೇ ಸ್ನಾನ ಮಾಡಲು ಇಳಿದಿದ್ದ. ಕಾಲು ಜಾರಿತು ಈಜಿ ದಡಕ್ಕೆ ಬರುವ ಪ್ರಯತ್ನವೆಲ್ಲವೂ ವಿಫಲವಾಗಿ ಒಂದು ನಿಮಿಷದಲ್ಲಿ ಸುಳಿಗೆ ಸಿಕ್ಕಿ ಮುಳುಗಿ ಹೋದ. ತಿರುಮಕೂಡಲು ನರಸಿಪುರದವರೆಗೂ ಆಳುಗಳು ನದಿಯ ಎರಡು ದಂಡೆಯಲ್ಲಿ ಹೋಗಿಬಂದರೂ ಶವ ಸಿಕ್ಕಲಿಲ್ಲ. ನದಿಯ ತೀರದಲ್ಲಿ ಅವನ ಅಪರಕರ್ಮಗಳು ನಡೆದವು. ಶ್ರೀನಿವಾಸ ಶ್ರೋತ್ರಿಯವರು ತಮ್ಮ ಮಗನನ್ನು ಕಳೆದುಕೊಂಡ ದುಃಖದಲ್ಲಿದ್ದರೂ ಮೊಮ್ಮಗನನ್ನು ನೋಡಿ ವಂಶವನ್ನು ಬೆಳೆಸುವ ಕುಡಿಯ ಮೂಲಕ ಸಮಾಧನ ಕಂಡುಕೊಂಡರು.

ಕಾದಂಬರಿಯಲ್ಲಿ ಲೇಖಕರು ನಂಜುಂಡಶ್ರೋತ್ರಿಯ ಸಾವು ಮತ್ತು ಕಪಿಲಾ ನದಿಯ ಪ್ರವಾಹ, ಕಪಿಲ ನದಿಯ ದಂಡೆಯಲ್ಲೆ ಶ್ರೀನಿವಾಸಶ್ರೋತ್ರಿಯವರ ಮನೆ ಇವೆಲ್ಲವನ್ನು ತಂತ್ರವಾಗಿ ಬಳಸಿಕೊಂಡಿದ್ದಾರೆ. ಹಾಗೂ ಇಡೀ ಕಾದಂಬರಿಯ ವಸ್ತುವಿಗೆ ನಂಜುಂಡಶ್ರೋತ್ರಿಯ ಸಾವು ಕಾದಂಬರಿಗೆ ಪ್ರಾರಂಭ ಕೊಡುತ್ತದೆ. ಮುಂದಿನ ಸನ್ನಿವೇಶಗಳಿಗೆ ಇದು ಮುಖ್ಯವಾಗಿದೆ ಕಾತ್ಯಾಯಿನಿ ಕಾಲೇಜಿಗೆ ಸೇರುವುದು ಅಲ್ಲಿ ರಾಜರಾಯ ಪರಿಚಯ ಶ್ರೀನಿವಾಸಶ್ರೋತ್ರಿಯವರಿಗೆ ಧರ್ಮ, ನಿಷ್ಠೆ, ವಂಶವನ್ನು ಉದ್ದಾರ ಮಾಡುವ ಕುಡಿಯಾದ ಮೊಮ್ಮಗನ ವಿದ್ಯಾಭ್ಯಾಸ ಇವೆಲ್ಲವು ಕಾದಂಬರಿಯ ವಿಸ್ತಾರವಾಗಿ ಬೆಳೆಯಲು ಈ ಸನ್ನಿವೇಶ ಪ್ರಮುಖ ಕಾರಣವಾಗಿದೆ. ಕಾದಂಬರಿಯು ಎರಡು ಕುಟುಂಬಗಳ ನಡುವಿನ ಕಥೆಯಾಗಿದ್ದು. ಈ ಎರಡು ಕುಟುಂಬಗಳ ಸಂಬಂಧ, ಅದಕ್ಕೆ ಕಾರಣವಾಗುವುದೇ ನಂಜುಂಡಶ್ರೋತ್ರಿಯ ಪಾತ್ರದ ಮೂಲಕ ನಂಜುಂಡಶ್ರೋತ್ರಿಯ ಗುರು ಸದಾಶಿವರಾಯ ಅವನ ಮೂಲಕ ಶ್ರೀನಿವಾಸಶ್ರೋತ್ರಿಯವರ ಪರಿಚಯ, ಹಾಗೂ ಕಾತ್ಯಾಯಿನಿ ಸದಾಶಿವರಾಯರ ತಮ್ಮ ರಾಜರಾಯನನ್ನು ಮದುವೆಯಾಗುವುದು ಇವೆರಡಕ್ಕು ಮುಖ್ಯವಾಗಿ ಕಾದಂಬರಿ ತಿರುವುಗಳನ್ನು ಪಡೆದು ಬೆಳವಣಿಗೆ ಹೊಂದಲು ಈ ಸನ್ನಿವೇಶ ಪ್ರಮುಖವಾಗಿ ಕಾದಂಬರಿಯಲ್ಲಿ ಬಂದಿದೆ.

## ಸದಾಶಿವರಾಯರಿಗೆ ಕರುಣರತ್ನೆ ಪರಿಚಯ ಮತ್ತು ಸಂಬಂಧ

ವಂಶವೃಕ್ಷ ಕಾದಂಬರಿಯಲ್ಲಿ ಸದಾಶಿವರಾಯರ ಪಾತ್ರ ಮುಖ್ಯವಾಗಿದ್ದು ಶ್ರೀನಿವಾಸಶ್ರೋತ್ರಿಗಳಿಂದ ಧರ್ಮದ ವಿಚಾರದ ಬಗ್ಗೆ ಮಾಹಿತಿ ಕೊಡಬೇಕಾಗಿ ಕೇಳಿಕೊಂಡು ಅವರಿಂದ ಹಣದ ಸಹಾಯ ಪಡೆದು ನಂತರ ಮೈಸೂರು ಮಹಾರಾಜರ ಸಹಾಯದಿಂದ "ಪ್ರಾಚೀನ ಭಾರತೀಯ ರಾಜ್ಯಶಾಸ್ತ್ರಕ್ಕೆ ಧರ್ಮದ ಆಧಾರ" ಎಂಬ ವಿಷಯವಾಗಿ ಸಂಶೋಧನೆ ಕೈಗೊಂಡರು. ಭಾರತದಲ್ಲಿ ಐತಿಹಾಸಿಕವಾಗಿ ಪ್ರಸಿದ್ಧಿ ಪಡೆದಿದ್ದ ಸ್ಥಳಗಳಿಗೆ ಪ್ರವಾಸ ಕೈಗೊಂಡು ಕನ್ಯಾಕುಮಾರಿಯಿಂದ ತಂಜಾವೂರು, ಮಧುರೆ, ಚಿದಂಬರ, ಮಹಾಬಲಿಪುರ ಮೊದಲಾದ ಎಲ್ಲಾ ಸ್ಥಳಗಳನ್ನು ಸಂದರ್ಶಿಸಿ ಹೈದರಾಬಾದಿನ ಎಲ್ಲೋರ ಗುಹಾಂತರ ದೇವಾಲಯಗಳಿಗೆ ಬಂದರು ಅಲ್ಲಿ ಮೂರು ದಿವಸ ಭವ್ಯಸಾಧನೆಯನ್ನು ನೋಡಿಕೊಂಡು ದೇವಗಿರಿ, ಔರಂಗಬಾದಿನ ಮೂಲಕ ಅಜಂತೆಗೆ ಬಂದರು. ಅಲ್ಲಿ ಗುಹೆಯಲ್ಲಿ ನಿಂತು ಅದನ್ನು ಪರೀಕ್ಷಿಸುತ್ತಿದ್ದರು. ಅಲ್ಲಿಗೆ ವೃದ್ಧದಂಪತಿಗಳು ಬಂದು ನೋಡುತ್ತಿದ್ದರು. ರಾಯರಿಗೆ "ನೀವು ಸಂಶೋಧಕರೆಂದು ಕಾಣುತ್ತಿದ್ದೀರಿ". ಈ ಗುಹೆ ಏಕೆ ಈ ಸ್ಥಿತಿಯಲ್ಲಿದೆ ಎಂದು ಕೇಳುವುದರ ಮೂಲಕ ಸಿಂಹಳದ ದಂಪತಿಗಳ ಪರಿಚಯವಾಯಿತು. ಹೀಗೆ ಮೂವರೂ ಗುಹೆಯನ್ನು ವೀಕ್ಷಿಸುತ್ತಾ ಬರುತ್ತಿದ್ದಾಗ. ಆ ದಂಪತಿಗಳ ಮಗಳಾದ 26 ವರ್ಷದ ಕರುಣಾರತ್ನೆ ಪರಿಚಯವಾಯಿತು. ಪರಸ್ಪರ ಅಭಿವಾದನೆಗಳಾದ ಮೇಲೆ ಕರುಣಾರತ್ನೆ ನಿಮ್ಮ ಹೆಸರು ಡಾ॥ ಸದಾಶಿವರಾವ್ ಅಂತಲ್ಲವೆ ಎಂದು ಕೇಳಿದಳು. "ಹೌದು ಎಂಬ ಸದಾಶಿವರಾಯ ಉತ್ತರಕ್ಕೆ ಹಾಗಾದರೆ ಪ್ರಾಚೀನ ಭಾರತೀಯ ರಾಜ್ಯಶಾಸ್ತ್ರಕ್ಕೆ ಧರ್ಮದ ಆಧಾರ" ಎಂಬ

ಗ್ರಂಥ ನಿಮ್ಮದೇ ಆ ಪುಸ್ತಕ ನನಗೆ ಸಿಕ್ಕಿಲ್ಲ ಅದರ ವಿಮರ್ಶೆ ಓದಿದ್ದೇನೆ ಅಂತಹ ಗ್ರಂಥದ ಲೇಖಕರಾದ ನಿಮ್ಮನ್ನು ನೋಡಿದ್ದು ನನಗೆ ಸಂತೋಷವಾಯಿತು. ನಾನು ಸಿಂಹಳದ ಸಂಸ್ಕೃತಿಯನ್ನು ಬೌದ್ಧಧರ್ಮದ ಹಿನ್ನೆಲೆಯಲ್ಲಿ ವ್ಯಾಸಂಗ ಮಾಡುವ ಒಂದು ವಿಷಯ ನನ್ನ ಮನಸ್ಸಿನಲ್ಲಿದೆ ಎಂದು ತಿಳಿಸಿ ಪರಸ್ಪರ ಊಟ ಮುಗಿಸಿದರು. ನಂತರ ಸದಾಶಿವರಾಯ ಮತ್ತು ಕರುಣರತ್ನ ಇಬ್ಬರು ಜೊತೆಯಲ್ಲೆ ಅಲ್ಲಿಯ ಚಿತ್ರಗಳು ಮತ್ತು ಗರ್ಭಗುಡಿಯೊಳಗಿನ ವಿಗ್ರಹಗಳನ್ನು ನೋಡುತ್ತಿದ್ದರು. ನಂತರ ರಾಯರು ಹೇಳಿದ್ದನ್ನು ರತ್ನೆ ಬರೆದುಕೊಳ್ಳ ತೊಡಗಿದಳು. ಹೀಗೆ ಇಬ್ಬರೂ ಸೇರಿ ಗುಹೆಯನ್ನು ಪುಸ್ತಕದಲ್ಲಿ ಇಳಿಸಿದರು ಮರುದಿನ ಜಯರತ್ನೆಯವರು ಹೊರಡುವ ಕಾರ್ಯಕ್ರಮವನ್ನು ಇಟ್ಟಿಕೊಂಡಿದ್ದರು ಆದರೆ ಮಗಳು ಕರುಣಾರತ್ನೆ ಇನ್ನೂ ಎರಡು ದಿನ ಅಲ್ಲಿ ಇರಲು ಬಯಸಿದಳು. ರಾಯರು ಹೇಳುವ ಅಜಂತ ಟಿಪ್ಪಣಿ ಅವಳಿಗೆ ಮುಖ್ಯವಾಗಿತ್ತು ಅವಳು ಶೀಘ್ರಲಿಪಿ ಬಲ್ಲವಳಾಗಿದ್ದು ಎಲ್ಲವನ್ನು ಬರೆದುಕೊಂಡಳು ಅವರಿಬ್ಬರೂ ಕೂಡಿ ಮುಖ್ಯವಾದ ಎಲ್ಲ ಗುಹೆಗಳ ವರ್ಣನೆ ಮತ್ತು ಅವುಗಳ ಆಧಾರದ ಮೇಲೆ ಕಟ್ಟಬಹುದಾದದ ಆ ಕಾಲದ ಸಂಸ್ಕೃತಿಯ ಸೂಚನೆಗಳನ್ನು ತೆಗೆದುಕೊಂಡರು. ನಂತರ ಮರುದಿನ ಪರಸ್ಪರ ವಿಳಾಸವನ್ನು ತೆಗೆದುಕೊಂಡರು.

ಕಾದಂಬರಿಯ ಈ ಸನ್ನಿವೇಶ ಕರುಣರತ್ನೆ ಮತ್ತು ಸದಾಶಿವರಾಯ ಸಂಶೋಧನೆಗೆ ಕಾರಣವಾಯಿತು ಮತ್ತು ಸಂಶೊಧನಾ ವಿದ್ಯಾರ್ಥಿನಿಯಾಗಿ ಆಕೆ ಬಂದು ತಾನು ಪದವಿ ಪಡೆದು ವಾಪಸ್ಸು ಹೋಗುವ ಮನಸ್ಸು ಇಲ್ಲದೇ, ಇಲ್ಲೇ ರಾಯರಿಗೆ ಸಹಾಯಕಳಾಗಿ ಉಳಿದುಕೊಂಡಳು. ಮುಂದೆ ಗುರು ಶಿಷ್ಯೆಯರ ಸಂಬಂಧ ಮದುವೆಯ ಮಟ್ಟಕ್ಕೆ ಹೋಗಿ ಪರಸ್ಪರ ವಿವಾಹವಾದರು. ರಾಯರು ಕರುಣರತ್ನೆಯನ್ನು ಎರಡನೆ ಮದುವೆಯಾಗುವುದು ಸಂಶೋಧನೆಯನ್ನು ಮುಂದುವರಿಸಿ ಕೊನೆಗೆ ಯಶಸ್ವಿ ಆಗುವುದಕ್ಕೆ ಕರುಣರತ್ನೆಯು ಪ್ರಮುಖ ಪಾತ್ರವಹಿಸಿದಳು. ಈ ಸನ್ನಿವೇಶದಲ್ಲಿ ಲೇಖಕರು ಅಜಂತ ಗುಹೆಗಳ ವರ್ಣನೆಯನ್ನು ಮಾಡಿದ್ದಾರೆ. ಬೌದ್ಧ ಧರ್ಮದ ಐತಿಹಾಸಿಕ ಬೆಳವಣಿಗೆ ಬುದ್ಧನ ವಿಚಾರಗಳು ಬಗ್ಗೆ ವರ್ಣಿಸಿ ವಿವರಗಳನ್ನು ನೀಡಿದ್ದಾರೆ. ಕರುಣ ರತ್ನೆ ಸದಾಶಿವರಾಯರು ಸತ್ತಮೇಲೆ ವಾಪಾಸ್ಸು ಹೋಗುವುದು ಇದೆಲ್ಲವು ಕಾದಂಬರಿಯ ಬೆಳವಣಿಗೆಗೆ ಪ್ರಮುಖವಾಗಿ ಕಂಡು ಬರುತ್ತದೆ. ಲೇಖಕರು ಕೆಲವು ತಂತ್ರ ಹಾಗೂ ಓದುಗರಲ್ಲಿ ಕುತೂಹಲವನ್ನು ಕಾಯ್ದುಕೊಳ್ಳಲು ಈ ರೀತಿಯಲ್ಲಿ ಮಾಡಿರುವುದನ್ನು ಕಾಣಬಹುದು. ಒಟ್ಟಿನಲ್ಲಿ ಸದಾಶಿವರಾಯ ಮತ್ತು ರತ್ನೆಯವರ ಭೇಟಿಯ ಸಂದರ್ಭ ಹಾಗೂ ಅವರ ನಡುವಿನ ವೈವಾಹಿಕ ಸಂಬಂಧ ಪ್ರಮುಖವಾದ ಸನ್ನಿವೇಶವಾಗಿದೆ.

## ರಾಜರಾಯ – ಕಾತ್ಯಾಯಿನಿಯರ ಪ್ರೇಮ ಮತ್ತು ಸಂಬಂಧ

ರಾಜರಾಯ ಸದಾಶಿವರಾಯರ ತಮ್ಮ ಇಂಗ್ಲೀಷ್‌ನಲ್ಲಿ ಎಂ.ಎ ಮಾಡಿ ಅದೇ ಕಾಲೇಜಿನಲ್ಲಿ ಉಪನ್ಯಾಸಕನಾಗಿ ಕೆಲಸಕ್ಕೆ ಸೇರಿದ ನಂತರ ಇಂಗ್ಲೆಂಡಿಗೆ ಹೋಗಿ ಓದಿ ಬರುವ ವಿದ್ಯಾರ್ಥಿವೇತನ ದೊರಕಿತು. ಅಲ್ಲಿ ಎರಡು ವರ್ಷ ಕಲಿತ ಮೇಲೆ ವಾಪಾಸ್ಸು ಬಂದು ಉಪನ್ಯಾಸಕ ವೃತ್ತಿಯನ್ನು

ಮುಂದುವರಿಸಿದನು. ರಾಜುವಿಗೆ ನಾಟಕದ ಬಗ್ಗೆ ಆಸಕ್ತಿ ಕಾಲೇಜಿನ ನಾಟಕ ಸಂಘದ ಅಧ್ಯಕ್ಷನಾಗಿದ್ದ ಈತನಿಗೆ ಪ್ರಿನ್ಸಿಪಾಲರು ಕಾಲೇಜಿನಲ್ಲಿ ಪ್ರತ್ಯೇಕ ಕೋಣೆಯೊಂದನ್ನು ಕೊಡಿಸಿದರು. ರಾಜು ಗಂಭೀರ ಸ್ವಭಾವದ ವ್ಯಾಸಂಗ ಜೀವಿಯಲ್ಲ, ಬುದ್ಧಿಶಕ್ತಿಯುಳ್ಳ ಯುವಕ, ಕಾಲೇಜಿನಲ್ಲಿ ನಾಟಕ ಆಡಿಸಲು ಅವನೇ ನಾಟಕಗಳನ್ನು ಬರೆಯುತ್ತಿದ್ದ. ಅವು ರಂಗದ ಮೇಲೆ ಯಶಸ್ವಿ ಆಗುತ್ತಿದ್ದವು. ಈತ ಅತ್ತಿಗೆ ನಾಗಲಕ್ಷ್ಮಿಗಿಂತ ಎರಡು ತಿಂಗಳೂ ದೊಡ್ಡವನು. ಪರಸ್ಪರ ಆತ್ಮೀಯತೆಯಿಂದ ಇದ್ದರು ಪೃಥ್ವಿಯು ಚಿಕ್ಕಪ್ಪನೊಂದಿಗೆ ಹೆಚ್ಚು ಅಚ್ಚಿಕೊಂಡಿದ್ದ.

ಶ್ರೀನಿವಾಸಶ್ರೋತ್ರಿಯವರ ಸೊಸೆ ಕಾತ್ಯಾಯಿನಿ ಸದಾ ಮನಸ್ಸಿನಲ್ಲಿ ಗಂಡನನ್ನು ನೆನಸಿಕೊಂಡು ಕಣ್ಣೀರು ಹಾಕುತ್ತಿದ್ದಳು. ಮುದ್ದಾದ ಮಗು ಚೀನಿಯನ್ನು ನೋಡಿ ಸಮಾಧಾನ ಪಟ್ಟಿಕೊಳ್ಳುತ್ತಿದ್ದಳು. ದಿನಕಳೆದಂತೆ ಮನೆಯಲ್ಲಿ ಎಲ್ಲ ಸೌಕರ್ಯಗಳಿದ್ದರೂ ಜೀವನ ಬೇಸರ ಎನಿಸಿತು. ಕಾತ್ಯಾಯಿನಿ ಕಾಲೇಜಿಗೆ ಸೇರಿ ತಾನು ಗಂಡ ಪೂರ್ಣಗೊಳಿಸದ ಬಿ.ಎ ಪದವಿಯನ್ನು ನಾನು ಮಾಡುತ್ತೇನೆ. ಆ ಮೂಲಕ ಅತ್ತೆ ಮಾವಂದಿರು ತಮ್ಮ ಮಗನಲ್ಲಿ ಇಟ್ಟಿದಂತಹ ಆಸೆಯನ್ನು ನಾನು ಈಡೇರಿಸುತ್ತೆವೆ ಎಂದು ಮಾವನಿಗೆ ತಿಳಿಸಿದಳು. ಅತ್ತೆ ಮಾವ ಮೊದಲು ಒಪ್ಪಿಗೆ ನೀಡದೆ ನಂತರ ಅವರೆ ಕಾತ್ಯಾಯಿನಿ ಕಾಲೇಜಿಗೆ ಸೇರಲು ಅಡ್ಡಿ ವ್ಯಕ್ತಪಡಿಸಲಿಲ್ಲ. ಕಾತ್ಯಾಯಿನಿ ಕಾಲೇಜಿಗೆ ಸೇರಿದಳು. ಪ್ರತಿನಿತ್ಯವೂ ರೈಲಿನಲ್ಲಿ ಕಾಲೇಜಿಗೆ ಶ್ರೀಪಾದರಾಯರ ಮಗಳೂ ವಾಸಂತಿ ಜೊತೆ ಹೋಗಿ ಬರುತ್ತಿದ್ದಳು. ಕಾಲೇಜು ವ್ಯಾಸಂಗ ಯಾವುದೇ ಅಡ್ಡಿ ಆತಂಕಗಳಿಲ್ಲದೆ ಸಾಗುತ್ತಿತ್ತು. ರಾಯರ ಮನೆಗೆ ಬಿಡುವಿನ ವೇಳೆಯಲ್ಲಿ ಹೋಗುತ್ತಿದ್ದಳು. ಕಾಲೇಜಿನಲ್ಲಿ ರಾಜರಾಯರು ಆಡಿಸುತ್ತುದ್ದ ನಾಟಕ ನೋಡುವ ಆಸೆ ಇದ್ದರೂ ಅವಳು ಹೋಗುತ್ತಿರಲಿಲ್ಲ. ಉಳಿದ ಹುಡುಗಿಯರು ನಾಟಕ ನೋಡಲು ಹೋಗುತ್ತಿದ್ದರು. ಒಂದು ದಿನ ವಾಸಂತಿ ಬಂದು ಭಾಗೀರತಮ್ಮನನ್ನು ಕೇಳಿದಳು. ಇವತ್ತು ಒಳ್ಳೆಯ ನಾಟಕವಿದೆ ಇಂಗ್ಲೀಷ್‌ನದು ಮ್ಯಾಕ್‌ಬೆತ್ ಅಂತ ನಮ್ಮ ಪರೀಕ್ಷೆಗೆ ಅದೇ ಪುಸ್ತಕವಿದೆ ನೀವೂ ಬನ್ನಿ ಅಂದ್ರೆ ನಿಮ್ಮ ಸೊಸೆ ಬರೋಲ್ಲ ನೀವಾದರೂ ಹೇಳಿ ಎಂದಾಗ ಶ್ರೋತ್ರಿಯವರು ಅಪ್ಪಣೆಕೊಟ್ಟರು. ಕಾತ್ಯಾಯಿನಿ ಮೊದಲ ಸಲ ನಾಟಕ ನೋಡಿದಳು ರಾಜು ಮ್ಯಾಕ್‌ಬೆತ್ ಪಾತ್ರ ಮಾಡಿ ಎಲ್ಲರು ಮೆಚ್ಚುವಂತೆ ಅಭಿನಯಿಸಿದ. ರಾಜು ಕಾತ್ಯಾಯಿನಿಯನ್ನು ಮರುದಿನ ನಾಟಕ ಹೇಗಿತು? ಎಂದು ಕೇಳದ ನಿಮ್ಮ ಪಾತ್ರ ಅದ್ಭುತವಗಿತ್ತು ಕ್ಲಾಸಿನಲ್ಲಿ ನೀವೂ ಹೀಗೆ ಮ್ಯಾಕ್‌ಬೆತ್‌ಗೆ ಕಳೆ ಕಟ್ಟಿರಲಿಲ್ಲ. ಹೀಗೆ ರಾಜು ಮತ್ತು ಕಾತ್ಯಾಯಿನಿಯರಲ್ಲಿ ಸ್ನೇಹ ಹೆಚ್ಚು ಬೆಳೆಯುತ್ತ ಹೋಯಿತು. ರಾಜು ಎಂತಹ ಪ್ರತಿಭಾಶಾಲಿ ಎಂದು ಹೊಗಳಿದಳು. ರಜೆ ಮುಗಿಸಿಕೊಂಡು ಕಾತ್ಯಾಯಿನಿ ಬಂದಾಗ ರಾಜು ನಿನ್ನಿಂದ ಒಂದು ಕೆಲಸ ಆಗಬೇಕು ಎಂದು ಕೇಳಿದಾಗ ನೀವು ನಾನು ಬರೆದ ನಾಟಕದಲ್ಲಿ ಪಾರ್ಟ್ ಮಾಡಬೇಕು ಎಂದನು. ನಾನು ಮಾಡುವುದಿಲ್ಲ ಎಂದಾಗ ನಾಗಲಕ್ಷ್ಮಿ ಒಪ್ಪಿಸಿದಳು ಹೀಗೆ ನಾಟಕದಲ್ಲೂ ಪಾತ್ರ ಮಾಡಿ ಯಶಸ್ವಿಯಾದಳು. ರಾಜುವಿನ ಮನಸ್ಸಿಗೆ ಈಗ ನಿದ್ರೆ ಬರುತ್ತಿರಲಿಲ್ಲ. ಊಟದ ಬಗ್ಗೆ ಆಸಕ್ತಿಯೂ ಇಲ್ಲ, ತನ್ನ ಸಂಘದ ನಾಟಕಗಳಲ್ಲಿಯೂ ಉತ್ಸಾಹ ಕಡಿಮೆಯಾಯಿತು. ಅವಳೊಬ್ಬ ಅವಿವಾಹಿತೆ ತರುಣಿ ಆಗಿದ್ದರೆ ತನ್ನ ಇಂಗಿತವನ್ನು ಬಿಚ್ಚಿ ಹೇಳಿಬಿಡುತ್ತಿದ್ದ. ಆದರೆ ಅವಳ

ಸ್ಥಿತಿಯು ಅವನ ಧೈರ್ಯವನ್ನು ಮಂಕು ಮಾಡುತ್ತಿತ್ತು. ತನ್ನ ಬಗ್ಗೆ ಅವಳಿಗೆ ವಿಶೇಷ ಆಸ್ಥಿ ವಹಿಸುತ್ತಿರುವುದನ್ನು ಗುರುತಿಸಿದ ಮೇಲೆ ಸ್ವಲ್ಪ ಭರವಸೆ ಬಂದಂತಾಯಿತು. ಮರುದಿನ ರಾಜು ಕಾತ್ಯಾಯಿನಿಯನ್ನು ಕುರಿತು ನಾನು ಜೀವನದಲ್ಲಿ ಮದುವೆಯೇ ಬೇಡವೆಂದು ಯೋಚಿಸಿದ್ದೆ, ಆದರೆ ಈಗ ಆ ನಿರ್ಧಾರ ಬದಲಾಗಿದೆ ಅವಳ ಕೈ ಹಿಡಿದು ಕೇಳಿದ ತನ್ನ ಮನಸ್ಸಿನಲ್ಲಿ ಅವಳ ಬಗ್ಗೆ ಇದ್ದಂತಹ ಪ್ರೀತಿಯ ಭಾವವನ್ನು ಬಿಚ್ಚಿಟ್ಟ. ಆದರೆ, ಕಾತ್ಯಾಯಿನಿಯು ತನ್ನ ಕೈಯನ್ನು ಬಿಡಿಸಿಕೊಳ್ಳಲಿಲ್ಲ ಮೌನದಿಂದ ಕುಳಿತು ತನ್ನ ಮನಸ್ಸಿನಲ್ಲಿ ಪ್ರಚಂಡ ವಿಚಾರ ಸುಳಿಯುತ್ತಿತ್ತು. ಆವೇಗದಲ್ಲಿ ಅದೇನು ಅನ್ನುವುದು ಅವಳಿಗೇ ತಿಳಿಯಲಿಲ್ಲ, ಸ್ವಲ್ಪ ಹೊತ್ತಿಗೆ ಅದು ಶಾಂತವಾಯಿತು. ಅವನು ನನ್ನ ಮಾತಿಗೆ ಉತ್ತರ ಕೊಡು ಎಂದು ಅವಳ ಕೈ ಹಿಸುಕಿ ಕೇಳಿದ ಅದಕ್ಕವಳು ನಿಮ್ಮನ್ನೂ ಬಿಟ್ಟು ನಾನು ಬದುಕಲಾರೆ ಅಂದಳು. ಹೀಗೆ ಇಬ್ಬರಲ್ಲೂ ಪ್ರೇಮ ಬೆಳೆಯಿತು. ಇಲ್ಲಿ ಮದುವೆಯೇ ಬೇಡವೆಂದು ನಿರ್ಧರಿಸಿದ್ದ ರಾಜು ಕಾತ್ಯಾಯಿನಿಯನ್ನು ಕಂಡು ಅವಳ ಪ್ರೀತಿಯ ಸೆಳೆಯಲ್ಲಿ ಬಿದ್ದನು. ತನ್ನ ಸ್ಥಿತಿಯನ್ನು ಮರೆತು ಕಾತ್ಯಾಯಿನಿ ತಾನು ಒಂದು ಮಗುವಿನ ತಾಯಿ ಎಂದು ಗೊತ್ತಿದ್ದರು ರಾಜುವಿನ ಸ್ನೇಹ ಪ್ರೀತಿಗೆ ಸಮ್ಮತಿಸಿದಳು. ರಾತ್ರಿಯಲ್ಲ ಮನಸ್ಸಿನ ದ್ವಂದ್ವತೆ ಆಕೆಯ ತಲೆಯಲ್ಲಿ ಸುಳಿದು ರಾಜುವನ್ನು ನೋಡಬಾರದೆಂದು ನಿರ್ಧರಿಸಿದಳು. ಮಾನವ ಸಹಜ ದೈಹಿಕ ಹಂಬಲ, ಆಸೆಗಳು ಅವಳನ್ನು ಮತ್ತೆ ರಾಜುವಿನ ಜೊತೆ ಸೇರಿಸಲು ಕಾರಣವಾದವು. ಕಾತ್ಯಾಯಿನಿ ಮತ್ತು ರಾಜು ಇವರ ನಡುವಿನ ಪ್ರೇಮದ ಮೂಲಕ ಸಾಂಪ್ರದಾಯಿಕ ನಂಬಿಕೆ ಆಚರಣೆಗಳ ವಿರುದ್ಧ ಎರಡೂ ಪಾತ್ರಗಳು ಪ್ರಗತಿಪರವಾದ ನಿಲುವುಗಳನ್ನು ಸೂಚಿಸುತ್ತದೆ. ಹಾಗೆಯೇ ಮುಂದುವರೆದು ಶ್ರೀನಿವಾಸಶ್ರೋತ್ರಿಯವರಿಗೆ ಇಷ್ಟವಿಲ್ಲದಿದ್ದರು ಕಾಲೇಜಿಗೆ ಯಾವ ಉದ್ದೇಶಕ್ಕಾಗಿ ಸೇರಿದಳೊ ಅದನ್ನು ಮರೆತು ರಾಜುವಿನ ಜೊತೆ ವೈವಾಹಿಕ ಸಂಬಂಧವನ್ನು ಪಡೆಯಲು ನಿರ್ಧರಿಸಿದಳು.

ಒಂದು ವಾರ ಕಾಲೇಜಿಗೆ ಹೋಗದೆ ರಾಜುವನ್ನು ನೋಡಬಾರದೆಂಬ ನಿರ್ಧಾರ ಮಾಡಿದರೂ. ಅವಳ ಮನಸ್ಸು ಸಂಪೂರ್ಣವಾಗಿ ರಾಜುವಿನಲ್ಲಿ ಬೆರೆತು ಹೋಗಿತ್ತು ಆ ಒಂದು ವಾರ ವಿಚಿತ್ರವಾದ ಹಿಂಸೆಯನ್ನು ಅನುಭವಿಸಿದಳು. ಓಡಿಹೋಗಿ ಅವರನ್ನು ಕಂಡು ಮಾತನಾಡಲೇ? ಎಂಬ ಅದಮ್ಯವಾದ ಅಭೀಪ್ಸೆ ಸಂಯಮವನ್ನು ಸೀಳಿಕೊಂಡು ಬರುತ್ತಿತ್ತು. ಈಗ ಅವಳ ಸುತ್ತಣ ಪ್ರಕೃತಿಯನ್ನು ಕುರಿತು ಯೋಚಿಸುತ್ತಿರಲಿಲ್ಲ. ನಿಶ್ಚೇತನ ಸ್ವರೂಪದ ಪ್ರಕೃತಿಯ ಚೇತನರೂಪವಾಗಿ ಈಗ ಅವಳೇ ಪ್ರಚಂಡ ತುಮುಲದ ರಂಗವಾಗಿದ್ದಳು. ಧರ್ಮ, ಸಮಾಜ, ನೀತಿ, ಮೊದಲಾದ ಕಲ್ಪನೆಗಳ ಕಟ್ಟುಪಾಡುಗಳೂ ಅವಳಲ್ಲಿ ಅಷ್ಟೇ ಪ್ರಚಂಡ ಶಕ್ತಿಯನ್ನು ಬೆಳೆದುಬಿಟ್ಟಿದ್ದವು. ಇಡೀ ದಿನ ರಾತ್ರಿ ಅವಳಿಗೆ ನಿದ್ರೆ ಬರಲಿಲ್ಲ ಧರ್ಮಕರ್ಮದ ವಿಷಯದಲ್ಲಿ ಯೋಚಿಸಿ ತಲೆ ಬರಡಾಗಿತ್ತು. ಮರುದಿನ ಕಾಲೇಜಿಗೆ ಹೋಗಿ ರಾಜರಾಯರನ್ನು ನೋಡಿ ಇವತ್ತು ರಜೆ ಹಾಕಿ ಎಲ್ಲಾದರೂ ಯಾರು ಇಲ್ಲದಕಡೆ ಹೋಗಿ ಮಾತನಾಡಬೇಕು ಎಂದಳು. ಸೈಕಲ್ ಮೇಲೆ ಇಬ್ಬರೂ ನಿರ್ಜನವಾದ ಪ್ರದೇಶಕ್ಕೆ ಹೋದರು. ಕಾತ್ಯಾಯಿನಿ ಹುಲ್ಲಿನ ಮೇಲೆ ಕುಳಿತಳು ರಾಜ ಬಂದು ಅವಳ ಪಕ್ಕದಲ್ಲೇ ಕುಳಿತು ಕೇಳಿದ "ಈಗ ಹೇಳು ನೀನು ಇಷ್ಟು

ದಿನ ಯಾಕೆ ನನ್ನನ್ನು ತಪ್ಪಿಸಿದ್ದೆ?" ಎಂಬುದಕ್ಕೆ ಕಾತ್ಯಾಯಿನಿ ನನ್ನ ಮನಸ್ಸಿನೊಳಗೆ ಹಿಂಸಾತ್ಮಕವಾದ ದ್ವಂದ್ವ ನಡೆಯುತ್ತಿತ್ತು ನೆನ್ನೆ ರಾತ್ರಿ ಅದನ್ನು ತುಳಿದು ಮೇಲೆದ್ದು ಬಂದೆ ಪರಸ್ಪರ ಮಾತನಾಡುತ್ತಿರುವಾಗ ಕರವಸ್ತ್ರದಲ್ಲಿ ತಂದಿದ್ದ ಮಲ್ಲಿಗೆ ಹೂವನ್ನು ಅವನ ಕೊರಳಿಗೆ ಹಾಕುವುದರಲ್ಲಿದ್ದಳು. ಆಗ ರಾಜು, ಹಿಂದೆ ನಾನು 'ಮೂಲತತ್ವ' ಹೇಳಿ ಅವರಿಬ್ಬರು ಅಲ್ಲಿ ಪರಸ್ಪರ ಪ್ರೀತಿಯಲ್ಲಿ ಅನುಶಕ್ತರಾದರು ಮತ್ತೊಂದು ದಿನ ಕೆ.ಆರ್.ಎಸ್.ಗೆ ಹೋಗಿ ಅಲ್ಲೆ ರೂಮು ಪಡೆದು ಒಂದು ದಿನ ಇದ್ದು ಬಂದರು ಈ ರೀತಿಯ ದೈಹಿಕ ಸುಖವನ್ನು ಅನುಭವಿಸಿದ ಮೇಲೆ ಕಾತ್ಯಾಯಿನಿ ಒಂದು ನಿರ್ಧಾರಕ್ಕೆ ಬಂದಳು. ರಾಜುವಿನ ಜೊತೆ ಮದುವೆ ಮಾಡಿಕೊಳ್ಳಬೇಕೆಂದು ನಿರ್ಧರಿಸಿದಳು. ಇದನ್ನು ಮಾವನವರಿಗೆ ಹೇಳಲು ಭಯವಾಗಿ ಅದನ್ನು ಪತ್ರದಲ್ಲಿ ಬರೆದು ಪೋಸ್ಟ್ ಮಾಡಿ ತನ್ನ ಮಗ ಅತ್ತೆ-ಮಾವಂದಿರನ್ನು ಬಿಟ್ಟು ರಾಜುವನ್ನು ಮದುವೆಯಾದಳು. ಕಾದಂಬರಿಯ ಕೇಂದ್ರ ಪಾತ್ರದಲ್ಲಿ ಕಾತ್ಯಾಯಿನಿ ಪಾತ್ರವು ಒಂದು. ಕಾಲೇಜಿಗೆ ಸೇರುವುದು, ರಾಜುವಿನ ಪರಿಚಯ, ನಾಟಕದಲ್ಲಿ ಪಾತ್ರ ಮಾಡುವುದು, ರಾಜುವನ್ನು ಪ್ರೀತಿಸುವ ಹಾಗೂ ಆತನೊಂದಿಗೆ ಮದುವೆಯಾಗುವ ಮನಸ್ಥಿತಿಯನ್ನು ತಳೆಯುವುದು ಪ್ರಗತಿಪರ ಚಿಂತನೆಯ ಪಾತ್ರವಾಗಿ ಕಾತ್ಯಾಯಿನಿ ಕಾಣುತ್ತಾಳೆ. ಸಂಪ್ರದಾಯದ ನಿಯಮಗಳಿಗೆ ವಿರುದ್ಧವಾಗಿ ತನ್ನ ಬದುಕನ್ನು ಕಟ್ಟಿಕೊಳ್ಳುವ ಸಲುವಾಗಿ ಅತ್ತೆ-ಮಾವ ಮಗನ ಪ್ರೀತಿಯಿಂದ ವಂಚಿತಳಾದರೂ ದೈಹಿಕ ಹಂಬಲ, ಮಾನವ ಸಹಜ ನಿಸರ್ಗದ ಬಯಕೆ ಇವುಗಳ ಪ್ರತೀಕವಾದಂತೆ ಕಾತ್ಯಾಯಿನಿ ರಾಜುವನ್ನು ಮದುವೆಯಾಗುವುದು ಪ್ರಮುಖ ಸನ್ನಿವೇಶವಾಗಿ ಕಾದಂಬರಿಯಲ್ಲಿ ಕಂಡುಬರುತ್ತದೆ.

## ನಾಗಲಕ್ಷ್ಮಿಯ ನೋವು ಮತ್ತು ಅಳಲು

ಕಾದಂಬರಿಯಲ್ಲಿ ಬರುವ ಸನ್ನಿವೇಶಗಳಲ್ಲಿ ನಾಗಲಕ್ಷ್ಮಿಯ ನೋವಿನ ಸಂದರ್ಭವು ಒಂದು. ಈಕೆ ಸದಾಶಿವರಾಯರ ಪತ್ನಿ. ಕುಣಿಗಲ್ ರಾಮಣ್ಣನ ಮಗಳು. ಸೋದರ ಮಾವನ ಮಗಳಾದ ನಾಗಲಕ್ಷ್ಮಿಯನ್ನು ರಾಯರು ವಿವಾಹವಾದರು. ನಾಗಲಕ್ಷ್ಮಿ ಗಂಡನ ಬಗ್ಗೆ ಹೆಚ್ಚು ಕಾಳಜಿ ಹೊಂದಿದ್ದರೂ ಅಧ್ಯಯನ ಶೀಲರಾದ ಸದಾಶಿವರಾಯರು ಯಾವಾಗಲೂ ಅಧ್ಯಯನದಲ್ಲೆ ತೊಡಗಿದ್ದರು. ಆಕೆ ಆತನಿಗೆ ಎಣ್ಣೆ ಸ್ನಾನ ಮಾಡಿಸಿ, ಊಟ ಮಾಡಿಸಿ, ಸ್ವಲ್ಪ ವಿಶ್ರಾಂತಿ ಪಡೆಯಿರಿ ಎಂಬಲ್ಲ ಕಾಳಜಿ ವಹಿಸುತ್ತಿದ್ದಳು. ಆಕೆ ನಾಟಕಕ್ಕೆ ಕರೆದುಕೊಂಡು ಹೋಗಿ, ಲಕ್ಷ್ಮಿಬಾಯಿ ವಸಂತಸೇನೆಯ ಪಾರ್ಟ್‌ಮಾಡುತ್ತಾಳಂತೆ ಎಂದು ಕೇಳಿದರೂ. ಆಕೆಯ ಮಾತಿಗೆ ಅಷ್ಟು ಆಸ್ಪದ ಕೊಡದೆ, ರಾಯರು ಮಹಾರಾಜರನ್ನು ನೋಡಲು ಹೋಗುವುದು ಸಂಶೋಧನೆಯ ವಿಷಯವಾಗಿ ರಾಯರು ಭಾರತದ ಬೇರೆ ಬೇರೆ ಸ್ಥಳಗಳಿಗೆ ಭೇಟಿನೀಡಿ. ಅಲ್ಲೆ ಕೆಲವು ಕಾಲ ಉಳಿದು ಅಧ್ಯಯನ ನಡೆಸುವುದು ರಾಯರಿಗೆ ಅಜಂತ ಎಲ್ಲೋರದಲ್ಲಿ ಕರುಣಾರತ್ನೆಯ ಪರಿಚಯ, ಆಕೆಯನ್ನು ಇಲ್ಲಿಗೆ ಸಂಶೋಧನಾ ವಿದ್ಯಾರ್ಥಿಯಾಗಿ ಕರೆಸಿಕೊಂಡು ಮಾರ್ಗದರ್ಶಕರಾಗುವುದು. ಕೆಲಕಾಲದ ನಂತರ ಗುರು-ಶಿಷ್ಯೆಯರ ಸಂಬಂಧ ಮುಂದುವರೆದು ರಾಯರು ಕರುಣಾರತ್ನೆಯನ್ನು ಮದುವೆ ಆಗುವುದು. ರಾಯರು ಕರುಣಾರತ್ನೆಯನ್ನು ಮದುವೆಯಾಗುವ

ವಿಚಾರವನ್ನು ಹೆಂಡತಿ ನಾಗಲಕ್ಷ್ಮಿಗೆ ಹೇಗೆ ಹೇಳಬೇಕೆಂದು? ಯೋಚಿಸಿದ್ದರು, ಬೆಳಿಗ್ಗೆ ತಮ್ಮ ರಾಜನ ಜೊತೆ ವಾಕಿಂಗ್ ಹೋಗುವಾಗ ಈ ವಿಚಾರ ತಿಳಿಸಿದ್ದರು, ರಾಜು ಅತ್ತಿಗೆ ನಾಗಲಕ್ಷ್ಮಿಗೆ ವಿಚಾರ ತಿಳಿಸಿದಾಗ ಮೂರು ದಿನ ನಾಗಲಕ್ಷ್ಮಿ ಊಟ ಮಾಡಲಿಲ್ಲ. ರಾಯರು ತಮ್ಮ ಓದು ಬರಹದಲ್ಲಿ ಅವರು ಅವಳನ್ನು ಅಲಕ್ಷಿಸಿದರು ಅವೆಲ್ಲವನ್ನೂ ಇದುವರೆಗೂ ಹೆಚ್ಚು ನೋವಿಲ್ಲದೆ ನುಂಗಿಕೊಂಡಿದ್ದಳು. ಆದರೆ ತನ್ನ ಗಂಡ ಬೇರೊಬ್ಬಳನ್ನು ಹೆಂಡತಿಯಾಗಿ ಸ್ವೀಕರಿಸುವುದು ಅವಳ ಸಹನೆಯನ್ನು ಮೀರಿತ್ತು. ರಾಜು ಅತ್ತಿಗೆಯ ಮನಸ್ಸು ಸ್ಥಿಮಿತದಲಿಲ್ಲವೆಂದು ಮೂರು ದಿನ ರಜೆ ಹಾಕಿ ಮನೆಯಲ್ಲೇ ಉಳಿದನು. ಅವಳಿಗೆ ವಿಷಯ ತಿಳಿದ ಮೊದಲ ರಾತ್ರಿ ರಾಯರನ್ನು ಕೇಳಿದಳು. ನೀವು ಇಂಥ ಕೆಲಸ ಮಾಡುವುದಕ್ಕೆ ನಾನು ಏನು ತಪ್ಪು ಮಾಡಿದ್ದೇ? ಎಂದು ಪ್ರಶ್ನಿಸಿದಳು. ಊಟ ಬಿಟ್ಟಳು ರಾಜು ಅವಳನ್ನು ಊಟ ಮಾಡುವಂತೆ ಕೇಳಿಕೊಂಡನು, "ರಾಜು ಅಮ್ಮ ಸತ್ತು ಹೋದರು, ಅಣ್ಣ ಹೋದರು, ಇವರೂ ಹೀಗೆ ಮಾಡಲು ಹೊರಟಿದ್ದರೆ ನೀನೊಬ್ಬ ನನ್ನನ್ನು ಯಾಕೆ ಹೀಗೆ ಹಚ್ಚಿಕೊಂಡು ಕೊರಗುತ್ತೀಯಾ", ಎಂದಳು. ಆಗ ರಾಜು ಅಣ್ಣನಿಗೆ ಪುಸ್ತಕದ ಹುಚ್ಚು ಹಿಡಿದಿದೆ ಅವಳಿಲ್ಲದೆ ಅದು ಪೂರ್ತಿ ಆಗುವುದಿಲ್ಲ ಪೂರ್ತಿ ಆಗದಿದ್ದರೆ ಅವನು ಮನೋರೋಗಿಯಾಗುತ್ತಾನೆ. ಅದಕ್ಕೆ ಅವಕಾಶ ಕೊಡಬಾರದೆಂದು ಸಮಾಧಾನ ಹೇಳುತ್ತಾನೆ. ಕಾತ್ಯಾಯಿನಿ ರಾಯರು ಮದುವೆಯಾದ ಸಂಗತಿಯನ್ನು ತಿಳಿಸಿದಾಗ ಹೆಂಡತಿ ಒಪ್ಪಿಗೆ ಪಡೆಯುವ ಮುನ್ನವೇ ಅಣ್ಣ ಯಾಕೆ ಹೀಗೆ ಮದುವೆಯಾದ ಎಂದು ಯೋಚಿಸಿತ್ತಿರುವಾಗಲೇ ಮದುವೆಯ ಸುದ್ದಿ ತಿಳಿದು ತಲೆಸುತ್ತಿ ಬಂದು ಪ್ರಜ್ಞೆ ತಪ್ಪಿಬಿದ್ದಳು. ರಾಜು ಕಾತ್ಯಾಯಿನಿಯರು ಮುಖಕ್ಕೆ ನೀರು ಹಾಕಿ ಸಮಾಧನ ಮಾಡಿದರು ರಾಯರು ಕರುಣಾರತ್ನೆಯನ್ನು ಇನ್ನೊಂದು ಮನೆಮಾಡಿ ಇರಿಸಿದರು.

ಯಾವುದೇ ಒಂದು ಹೆಣ್ಣು ತಾನು ಇರುವಾಗಲೇ ಗಂಡ ಇನ್ನೊಂದು ಮದುವೆಯಾಗುವುದನ್ನು ಸಹಿಸುವುದಿಲ್ಲ ಹಾಗೆಯೇ ನಾಗಲಕ್ಷ್ಮೀಯೂ ಕೂಡ ಗಂಡ ಎರಡನೆ ಮದುವೆ ಆಗುತ್ತಿದ್ದಾನೆಂಬ ವಿಷಯ ತಿಳಿದ ನಾಗಲಕ್ಷ್ಮಿಯ ಮನಸ್ಸು ನೋವಾಯಿತು. ನಾನೇನು ಕಡಿಮೆ ಮಾಡಿದ್ದೀನಿ ಎಂಬ ಪ್ರಶ್ನೆ ಅವಳಿಂದ ಹೊರಬಿತ್ತು. ನನ್ನನ್ನು ಬಿಟ್ಟು ಇನ್ನೊಬ್ಬಳ ಜೊತೆ ಸಂಸಾರ ಮಾಡಿದರೆ ನನ್ನಗತಿಯೇನು? ಮಗನ ಭವಿಷ್ಯವೇನು? ಎಂದು ಚಿಂತಿಸಿದಳು. ಈ ನೋವಿಗೆ ರಾಜು ಸಮಾಧಾನವನ್ನು ಹೇಳಿದ. ರಾಯರ ಎರಡನೆ ಮದುವೆಯ ವಿಚಾರದಿಂದ ಆಕೆ ದುಃಖಿತಳಾಗಿ ಊಟ ಮಾಡದೆ, ನಿದ್ರೆ ಮಾಡದೆ ಮೂರುದಿನಗಳು ಯಾತನೆಯನ್ನು ಅನುಭವಿಸಿದಳು. ಆದರೆ ಜೀವನದಲ್ಲಿ ಎಲ್ಲರನ್ನೂ ಕಳೆದುಕೊಂಡ ನಾನು ಹೀಗೆ ಗಂಡನಿಂದ ದೂರವಾದರೆ ನನ್ನ ಮುಂದಿನ ಭವಿಷ್ಯದ ಸ್ಥಿತಿಯನ್ನು ನೆನೆದುಕೊಂಡು ದುಃಖಿಸಿದಳು. ಕಾದಂಬರಿಯಲ್ಲಿ ಆಕಸ್ಮಿಕ ಪಾತ್ರಗಳ ಸೃಷ್ಟಿಯ ಮೂಲಕ ಕಥೆ ಹೇಗೆ ಮುಂದುವರಿಯಬಹುದೆಂದು ತಂತ್ರದೊಂದಿಗೆ ಭೈರಪ್ಪನವರು ಕರುಣಾರತ್ನೆಯ ಪಾತ್ರ ಸೃಷ್ಟಿಯಾಗಿದೆ. ಭಾರತೀಯ ಸಂದರ್ಭದಲ್ಲಿ ಮೊದಲ ಹೆಂಡತಿ ಇರುವಾಗಲೇ ಎರಡನೇ ಮದುವೆಗೆ ಅವಕಾಶ ಇಲ್ಲದಿದ್ದರೂ ಸಾಂಪ್ರದಾಯಿಕ ಆಚರಣೆಗಳನ್ನು ಮೀರಿ ರಾಯರು ಮದುವೆಯಾಗುವುದನ್ನು

ಕಾದಂಬರಿಯಲ್ಲಿ ಕಾಣಬಹುದು. ನಾಗಲಕ್ಷ್ಮಿ ಸಂಪ್ರದಾಯಸ್ಥೆ ಹೆಣ್ಣಾಗಿ ಭಾರತೀಯ ಸ್ತ್ರೀಯರು ನಂಬಿದ ಪತಿಭಕ್ತಿ ಅವರ ಸೇವೆಗೆ ಯಾವ ಕೊರತೆಯೂ ಇಲ್ಲದಂತೆ ಗಂಡನನ್ನು ನೋಡಿಕೊಂಡರು. ರಾಯರು ತಮ್ಮ ಸಂಶೋಧನೆಯ ಸಾಧನೆಗಾಗಿ ಕರುಣಾರತ್ನೆಯನ್ನು ಮದುವೆಯಾಗುವುದು ಇದಕ್ಕೆ ತಮ್ಮನಾದ ರಾಜು ಕೂಡ ಅತ್ತಿಗೆಯ ಸಮಾಧಾನ ಪಡಿಸಿ ಮದುವೆಗೆ ಒಪ್ಪಿಸುವ ಪ್ರಯತ್ನ ಮಾಡುವುದನ್ನು ಕಾಣುತ್ತೇವೆ. ನಾಗಲಕ್ಷ್ಮಿ ತನ್ನ ಹಾಗೂ ಮಗ ಪೃಥ್ವಿಯ ಸ್ಥಿತಿಯನ್ನು ಕಂಡು ಹಾಗೂ ಆತನ ಭವಿಷ್ಯದ ಬಗ್ಗೆ ಯೋಚಿಸಿ ಬದುಕಿನಲ್ಲಿ ಈ ರೀತಿಯಾದ ನೋವನ್ನು ಅನುಭವಿಸುವುದು ಕಾದಂಬರಿಯಲ್ಲಿ ಕಂಡರು ಮುಂದಿನ ದಿನಗಳಲ್ಲಿ ದೃಢ ನಿರ್ಧಾರದೊಂದಿಗೆ ಸಮಾಜದಲ್ಲಿ ಜರಗುವ ಇಂತಹ ಪರಿಸ್ಥಿಸಿ ಸಂದರ್ಭಕ್ಕೆ ಹೊಂದಿಕೊಳ್ಳುವ ಹೆಣ್ಣಿನ ಮನೋಧರ್ಮಗಳನ್ನು ಈ ಪಾತ್ರದ ಮೂಲಕ ನೋಡಬಹುದು. ಏನೇ ಆದರೂ ಆಕೆ ಗಂಡನ ಪ್ರೀತಿ, ಎರಡನೆ ಮದುವೆಯ ವಿಚಾರದಲ್ಲಿ ಆದ ನೋವು ಆಕೆ ಅನುಭವಿಸಿದ ಸಂಕಟ ಕಾದಂಬರಿಯ ಬೆಳವಣಿಗೆಗೆ ಕಾರಣವಾಗಿರುವುದನ್ನು ಕಾಣಬಹುದು.

## ಕಾತ್ಯಾಯಿನಿ ತನ್ನ ಮಗನನ್ನು ಕಂಡಾಗ ಆದ ಸಂತೋಷ ಮತ್ತು ಅನುಭವಿಸಿದ ನೋವು

ವಂಶವೃಕ್ಷ ಕಾದಂಬರಿಯಲ್ಲಿ ಕಾತ್ಯಾಯಿನಿಯ ಪಾತ್ರ ಮುಖ್ಯವಾದುದು. ಪ್ರಗತಿಪರವಾದ ನಿರ್ಣಯಗಳನ್ನು ಮೈಗೂಸಿಕೊಂಡು ಬರುವಂತಹ ಪಾತ್ರ, ಗಂಡನನ್ನು ಕಳೆದುಕೊಂಡು ವಿಧವೆಯಾದರು ಕಾಲೇಜಿಗೆ ಸೇರಿ ರಾಜರಾಯರನ್ನು ಮದುವೆಯಾಗುತ್ತಾಳೆ. ಇದಕ್ಕೆ ಕಾರಣ ಮಾನವ ಸಹಜ ದೈಹಿಕವಾದ ಹಂಬಲ, ಎರಡು ವರ್ಷದ ತನ್ನ ಮಗನಾದ ಚೀನಿಯನ್ನು ಬಿಟ್ಟು, ರಾಜುವಿನ ಜೊತೆಗಿನ ವಿವಾಹ ಸ್ವಲ್ಪ ಸಂತೋಷವನ್ನು ಉಂಟುಮಾಡಿದರು ಹೆತ್ತತಾಯಿಯ ಮನಸ್ಸು ಮಗನನ್ನು ಹಾಗಾಗ್ಗೆ ನೆನಸಿಕೊಳ್ಳುವ ಹಾಗೂ ಅವನ ಬಾಲ್ಯದ ದಿನದಲ್ಲಿ ಕಳೆದ ಸಂದರ್ಭದಿಂದ ಆಕೆಯ ಮನಸ್ಸು ಅವನನ್ನು ನೆನೆದುಕೊಂಡಾಗ ನೋವಾಗುತ್ತದೆ. ರಾಜುವನ್ನು ಮದುವೆಯಾದ ಸ್ವಲ್ಪದಿನಗಳ ನಂತರ ತನ್ನ ಮಗ ಚೀನಿಯನ್ನು ಬೇಕೆಂದು ಮಾವನವರಿಗೆ ಕಾಗದ ಬರೆದು ತಿಳಿಸಿ, ಮನೆಗೆ ಬಂದು ಕಳಿಸಿ ಎಂದಾಗ ಮಾವ ಶ್ರೀನಿವಾಸಶ್ರೋತ್ರಿ ಕಳುಹಿಸಲು ಒಪ್ಪಲಿಲ್ಲ. ಮಗ ಚೀನಿಯನ್ನು ಸಹ ತಾಯಿಯ ಜೊತೆ ಹೋಗಲು ನಿರಾಕರಿಸಿದಾಗ, ಆಕೆ ಅತೀವ ದುಃಖವನ್ನು ಅನುಭವಿಸಿ ನಿರ್ಧಾರ ಮಾಡಿಕೊಂಡು ವಾಪಾಸ್ಸು ಹೋಗುತ್ತಾಳೆ. ರಾಜುವಿನಿಂದ ಮತ್ತೆ ತಾಯಿಯಾಗುವ ಸಂದರ್ಭದಲ್ಲಿ ಸ್ವಲ್ಪ ಈ ನೋವನ್ನು ಮರೆಯಲು ಪ್ರಯತ್ನಿಸಿದರು, ವಿಧಿ ಅದಕ್ಕೆ ತಣ್ಣೀರು ಎರಚಿದಂತೆ ಮೂರು ಮಕ್ಕಳು ಗರ್ಭಪಾತವಾಗುತ್ತದೆ. ಇದರೊಂದಿಗೆ ಮತ್ತೆ ತನ್ನ ಮಗನಾದ ಚೀನಿಯ ನೆನಪು ಮತ್ತೆ ಮತ್ತೆ ಕಾಡುತ್ತಿರುತ್ತದೆ. ತಾನು ಎಂ.ಎ ಪದವಿಯನ್ನು ಮುಗಿಸಿ ಕಾಲೇಜಿನಲ್ಲಿ ಅಧ್ಯಾಪಕಿಯಾಗಿ ಸೇರಿಕೊಂಡು ಸ್ವಲ್ಪ ನೋವನ್ನು ಮರೆತು ಜೀವನ ನಡೆಸುತ್ತಿರುವಾಗ ಮತ್ತೆ ಮತ್ತೆ ಆ ನೋವು ತನ್ನನ್ನು ಕಾಡದೆ ಬಿಡುತ್ತಿರಲಿಲ್ಲ. ತನ್ನ ಜೀವನವನ್ನು ಇಬ್ಬಗೆಯಾಗಿ ಒಡೆದು ನಿರಂತರ ದ್ವಂದ್ವದಲ್ಲಿ ದೂಡಿದ ಶಕ್ತಿಯ ಬಗ್ಗೆ

ಕಾತ್ಯಾಯಿನಿ ಚಿಂತಿಸುತ್ತಲೇ ಇದ್ದಳು, ನಿರಪೇಕ್ಷವಾದ ತಾತ್ವಿಕ ವಿಚಾರಗಳ ತಾಕಲಾಟಕ್ಕೆ ಒಳಗಾಗಿ ಹೃದಯ, ಭಾವನೆ ಮತ್ತು ಮನಃಸ್ಥಿತಿಯನ್ನು ಎರಡಾಗಿ ಸೀಳಿ ಅವಳ ಜೀವನವನ್ನು ನುಚ್ಚುನೂರಾಗಿಸುವ ದ್ವಂದ್ವತೆಯನ್ನು ಆಕೆ ಅನುಭವಿಸಿದಳು. ಬೇಸಿಗೆ ರಜೆ ಕಳೆದು ಕಾಲೇಜು ಪ್ರಾರಂಭವಾದ ಮೊದಲ ದಿನಗಳು ಜೇಷ್ಠಮಾಸದ ಜಡಿಮಳೆ ಶುರುವಾಗಿತ್ತು. ಕಾತ್ಯಾಯಿನಿ ಕಾಲೇಜಿಗೆ ಹೋಗಿದ್ದಾಗ ಹಿಂದೆ ಅಧ್ಯಾಪಕರಾಗಿದ್ದ ಒಬ್ಬರು ಸತ್ತು ಹೋಗಿದ್ದರಿಂದ ಕಾಲೇಜಿಗೆ ರಜೆ ಘೋಷಿಸಿದ್ದರು. ಸ್ವಲ್ಪ ಯೋಚಿಸಿ ಈ ದಿನ ನಂಜನಗೂಡಿಗೆ ಹೋಗಬೇಕೆಂದು ಅಂತಃಕರಣ ಹೇಳಿತು. ರೈಲ್ವೆ ಸ್ಟೇಷನಿಗೆ ಬಂದು ಟಿಕೇಟ್ ಪಡೆದು ರೈಲಿನಲ್ಲಿ ನಂಜನಗೂಡಿಗೆ ಹೋದಳು ಎದೆ ಕಂಪಿಸುತ್ತಿತ್ತು. ರೈಲಿನಿಂದ ಇಳಿದು ಹಿಂದೆ ತನ್ನದೇ ಆಗಿದ್ದ ಮನೆಯ ಮುಂದೆ ನಿಂತಳು. ಮನೆ ಬಾಗಿಲ ಮುಚ್ಚಿತ್ತು ಬೀಗಹಾಕಿರಲಿಲ್ಲ ಬಾಗಿಲು ತೆಗೆದು ಒಳಗೆ ಹೋಗಲು ಅವಳಿಗೆ ಮನಸ್ಸಾಯಿತು, ಅದರೆ ಮನಸ್ಸಿನ ಒಳಗಿನಿಂದ ಹೊಗೆ ಎದ್ದಂತೆ ಅಧೈರ್ಯವು ವ್ಯಾಪಿಸಿತು. ಇಡೀ ಶರೀರ ನಡುಗುತ್ತಿತ್ತು ಎಷ್ಟೇ ಪ್ರಯತ್ನ ಮಾಡಿದರು ಮನಸ್ಸು ಒಳಗೆ ಹೋಗಲು ಒಪ್ಪಲಿಲ್ಲ. ವಾಪಾಸ್ಸು ರೈಲಿನಲ್ಲಿ ಮೈಸೂರಿಗೆ ಬಂದಳು.

ಮರುದಿನವೂ ಸೋನೆ ಹನಿಯುತ್ತಿತ್ತು ಹಿಂದಿನ ರಾತ್ರಿಯಿಂದ ನಿದ್ರೆ ಬಾರದೆ ಈ ದಿನ ಕಾತ್ಯಾಯಿನಿಗೆ ಮಂಕು ಕವಿದಂತೆ ಆಗಿತ್ತು. ಕಾಲೇಜಿನಲ್ಲಿ ಜೂನಿಯರ್ ಇಂಟರ್‌ಮಿಡಿಯಟ್ ತರಗತಿ ಇತ್ತು. ಅವಳು ಕೊಠಡಿಯನ್ನು ಪ್ರವೇಶಿಸಿದ ತಕ್ಷಣ ಹುಡುಗರು ಶಬ್ಧ ಮಾಡದೆ ಎದ್ದು ನಿಂತರು. ತನ್ನ ಕುರ್ಚಿಯ ಮೇಲೆ ಕುಳಿತು ಕಾತ್ಯಾಯಿನಿ ಹಾಜರಿ ತೆಗೆದುಕೊಳ್ಳಲು ಪ್ರಾರಂಭಿಸಿದಳು. ತರಗತಿ ಕೋಣೆಯ ಕಿಟಕಿಯಿಂದ ಚಾಮುಂಡಿಬೆಟ್ಟ ಕಾಣುತಿತ್ತು. ನೆನ್ನೆ ರೈಲಿನಲ್ಲಿ ಹೋಗುವಾಗ ಕಂಡಂತೆಯೇ ಈ ದಿನವೂ ಅದರ ಶಿರವೂ ಮೋಡದಲ್ಲಿ ಮುಚ್ಚಿ ಹೋಗಿತ್ತು. ಆದರೂ ಅದು ಗಾಂಭೀರ್ಯದ ಘನರೂಪವಾಗಿ ನಿಂತಿತ್ತು. ಹಾಜರಿ ಪುಸ್ತಕವನ್ನು ಮುಚ್ಚಿ ಮೇಜಿನ ಮೇಲೆ ಇಟ್ಟು ಬೆಟ್ಟವನ್ನು ಅವಳು ನೊಡುತ್ತ ಕುಳಿತಳು ಸ್ವಲ್ಪ ಸಮಯದ ನಂತರ ತಾನು ಆ ವರ್ಷದಲ್ಲಿ ತೆಗೆದುಕೊಳ್ಳುವ ಕಾವ್ಯದ ಪುಸ್ತಕವನ್ನು ತೆಗೆದು ಪಾಠ ಪ್ರಾರಂಭಿಸಿದಳು. ಅಷ್ಟರಲ್ಲಿ ಬಾಗಿಲಿನಿಂದ ಒಬ್ಬ ಹುಡುಗ ಕೇಳಿದ, ಮೇ ಐ ಕಮ್ ಇನ್? ಕಮ್ ಇನ್, ಎಂದು ಹೇಳಿ ಅವಳು ಬಾಗಿಲು ಕಡೆ ತಿರುಗಿ ನೋಡಿದಳು. ಅವಳ ಮುಖ ಸ್ತಬ್ದವಾಯಿತು. ಕಣ್ಣುಗಳು ಬರುತ್ತಿದ್ದ ಹುಡುಗನ ಮೇಲೆಯೇ ನೆಟ್ಟವು ಅಗಲವಾದ ಮುಖ, ವಿಶಾಲಕಣ್ಣು, ನೀಳಮೂಗು, ಎತ್ತರವಾದ ಮೈಕಟ್ಟು, ಕ್ರಾಪು ಬಿಟ್ಟಿದ್ದಾನೆ. ಹಣೆಯ ಮೇಲೆ ಅಕ್ಷತೆಯ ಬೊಟ್ಟು, ಷರಟಿನ ಮೇಲೆ ಪ್ಯಾಂಟ್ ಹಾಕಿ, ಕಾಲಿಗೆ ಬೂಟು ಹಾಕಿದ್ದಾನೆ. ಕೈಯಲ್ಲಿ ನೆನೆದಿರುವ ಒಂದು ಕೊಡೆ ಆ ವೇಷದಲ್ಲಿ ನಡದು ರೂಢಿ ಇಲ್ಲವೆಂದು ಅವನ ನಡಿಗೆಯೇ ಹೇಳುತ್ತದೆ. ಶ್ರೋತ್ರಿಯವರದೇ ಮೈಕಟ್ಟು ನಿಲುವು ಮುಖಚರಿಯೆ ತನ್ನ ಮೊದಲ ಮದುವೆಯಾದಾಗ ತನ್ನ ಪತಿ ಕೂಡ ಹೆಚ್ಚು ಕಡಿಮೆ ಹೀಗೆ ಇದ್ದರು. ಈ ರೀತಿ ಅವನನ್ನೆ ನೋಡುತ್ತ ಇದ್ದ ಕಾತ್ಯಾಯಿನಿ ಪಾಠ ಪ್ರಾರಂಭಿಸಿದಳು. ಆಕೆ ಇನ್ನೂ ಎರಡು ವಾಕ್ಯ ಕೂಡ ಹೇಳಿರಲಿಲ್ಲ ಆಗ ಆ ಹುಡುಗ ಮೇಡಂ ನನ್ನ ಅಟೆಂಡನ್ಸ್ ಎಂದು ಕೇಳಿದ. ಮೇಜಿನ ಮೇಲಿದ್ದ ಹಾಜರಾತಿ ಪುಸ್ತಕ ತೆಗೆದು ನಿನ್ನ ಹೆಸರೇನು? ಎಂದು ಕೇಳಿದಳು. ಆಗ ಆ ಹುಡುಗ

'ಎನ್. ಶ್ರೀನಿವಾಸಶ್ರೋತ್ರಿ' ಎಂದು ಹೇಳಿದ. ತಕ್ಷಣವೇ ಕಾತ್ಯಾಯಿನಿಯ ಕೈ ಸೂಕ್ಷ್ಮವಾಗಿ ಕಂಪಿಸಿತ್ತು ಮುಖವು ಬೆವೆತು, ಹಣೆಯ ಮೇಲೆ ಸಣ್ಣ ಹನಿಗಳು ಮೂಡಿದವು. ನಿಂತಿರುವುದಕ್ಕೆ ಕಷ್ಟವಾಗಿ ಕುರ್ಚಿಯ ಮೇಲೆ ಕುಳಿತಳು. ಮತ್ತೆ ಪಾಠ ಪ್ರಾರಂಭಿಸಿದಳು ಆದರೆ ಏನು ಹೇಳಬೇಕೆಂದು ಮರೆತು ಹೋಯಿತು. ತಲೆ ಶೂನ್ಯದ ಗೋಲದಂತಾಯಿತು. ಅಬದ್ಧ ಪಾಠ ಹೇಳುವುದಕ್ಕಿಂತ ಪಾಠ ನಿಲ್ಲಿಸುವುದು ಸರಿಯೆಂದು ಯೋಚಿಸಿ ಪುಸ್ತಕ ಮುಚ್ಚಿ ನಿಶಬ್ದವಾಗಿ ಹೊರಗೆ ಹೋಗುವಂತೆ ವಿದ್ಯಾರ್ಥಿಗಳಿಗೆ ಹೇಳಿ ಮೊದಲಿಗೆ ಹುಡುಗರು ಹೊರಗೆ ಬರುವ ಮುನ್ನ ತಾನೇ ಬಾಗಿಲಿನ ಹತ್ತಿರ ಬಂದು ನಿಂತಳು. ಹುಡುಗರು ಒಬ್ಬೊಬ್ಬರಾಗಿ ಹೊರಗೆ ಹೋಗುತ್ತಿದ್ದರು. ಕೊನೆಯ ಡೆಸ್ಕಿನಲ್ಲಿ ಕುಳಿತಿದ್ದ ಚೀನಿ ತನ್ನ ಹತ್ತಿರ ಬರುತ್ತಾನೆ, ಅವನೇ ತನ್ನನ್ನು ಮಾತನಾಡಿಸುತ್ತಾನೆ, ತನಗೆ ಅವನ ಗುರುತು ಸಿಕ್ಕಿತು, ತಾನು ಯಾರು ಎನ್ನುವುದು ಅವನಿಗೆ ತಿಳಿದೇ ಇರುತ್ತದೆ ಎಂಬ ಸಂಪೂರ್ಣ ಭರವಸೆಯಿಂದ ಅಲ್ಲಿ ನಿಂತಳು. ಆದರೆ ಚೀನಿ ಮಾತನಾಡಿಸದೆ ಹೊರಗೆ ಹೊರಟುಹೋದ ಅವಳನ್ನು ಮಾತನಾಡಿಸಲಿಲ್ಲ. ನಿರಾಶೆ ಅವಳ ಕರುಳನ್ನು ಹಿಂಡಿ, ಮಗನನ್ನು ನೋಡಿ ಅವಳ ಮುಖ ಅರಳಿತು. ಆದರೆ ಚೀನಿ ಅದಕ್ಕೆ ಅವಕಾಶ ಕೊಡಲಿಲ್ಲ. ತಾಯಿಯಾದ ತನ್ನನ್ನು ಅವನು ಗುರುತಿಸಲಿಲ್ಲವೆಂಬ ನೋವು ಹಿಂಡುತ್ತಿತ್ತು. ತಾಯಿಯ ವಿಷಯ ಅವನಿಗೆ ತಿಳಿದಿದೆ ಅನಿಸುತ್ತದೆ ಎಂದು ಯೋಚಿಸುತ್ತ ರಾತ್ರಿ ಕಳೆದಳು. ಕಾತ್ಯಾಯಿನಿ ಎಷ್ಟೋ ದಿನವಾದ ಮೇಲೆ ಮಗ ಚೀನಿಯನ್ನು ನೋಡಿ ಅವಳ ಮನಸ್ಸು ಸಂತೋಷದಿಂದ ಕೂಡಿದರು ಮಗ ತನ್ನ ಜೊತೆ ಮಾತನಾಡಲಿಲ್ಲ. ತಾನು ಆತನನ್ನು ಬಿಟ್ಟು ಬಂದು ಬೇರೆ ಮದುವೆಯಾದ ಸಂಗತಿ ತಿಳಿದಿರಬಹುದು ಎಂದು ಚಿಂತೆ ಮಾಡುತ್ತ ರಾತ್ರಿಯನ್ನು ಕಳೆದಳು. ಒಬ್ಬ ತಾಯಿ ತಾನು ಹೆತ್ತ ಮಗನನ್ನು ನೋಡಿ ಸಹಜವಾಗಿ ತಾಯಿ ಹೃದಯ ಭಾವಸ್ಪಂದನೆಗೆ ಒಳಗಾಯಿತು. ಆಕೆ ಆ ಸಂದರ್ಭದಲ್ಲಿ ಅನುಭವಿಸುವ ತಲ್ಲಣ, ಆತಂಕ, ಆನಂದ, ದುಃಖ ಎಲ್ಲವು ಆಕೆಯಲ್ಲಿ ಉಂಟಾದವು.

ಮರುದಿನ ಕೈಯಲ್ಲಿ ಹಾಜರಾತಿ ಪುಸ್ತಕವನ್ನು ಹಿಡಿದು ಅವಳು ತರಗತಿಯ ಕೋಣೆಯನ್ನು ಪ್ರವೇಸುವಷ್ಟರಲ್ಲಿ ಎಲ್ಲಾ ವಿದ್ಯಾರ್ಥಿಗಳು ಬಂದು ಕುಳಿತಿದ್ದರು. ಕೊನೆಯ ಡೆಸ್ಕಿನಲ್ಲಿ ಕುಳಿತಿದ್ದ ಚೀನಿಯ ಕಡೆ ನೋಡಿದಳು ಆತನು ತನ್ನ ಕಡೆ ನೋಡಿದ ಅವನಿಗೆ ತನ್ನ ಗುರುತು ಸಿಕ್ಕಿದೆ. ಈ ದಿನ ಪಾಠವಾದ ಮೇಲೆ ಅವನೇ ಹತ್ತಿರ ಬಂದು ಮಾತನಾಡಿದುತ್ತನೆ ಎಂಬ ಆಸೆ ಮೂಡಿತು. ಪಾಠ ಮಾಡುವಾಗ ಅವನನ್ನು ನೋಡುತ್ತ ಅವನ ಕಡೆಗೆ ಲಕ್ಷ್ಯವಿಟ್ಟು ನೋಡುತ್ತಿದ್ದಳು. ಪಾಠ ಮುಗಿಸಿ ಹೊರಬಂದಳು. ತನ್ನ ಪರಿಚಯ ಅವನಿಗೆ ಇದೆ ಎನ್ನುವ ಸಂದೇಹ ಬಂದಿತು. ಅವನು ನನ್ನನ್ನು, ನನ್ನ ಪರಿಚಯವನ್ನು ನಿರಾಕರಿಸುತ್ತಿದ್ದಾನೆಯೆ? ಎಂಬ ಯೋಚನೆ ಮನಸ್ಸಿನಲ್ಲಿ ಹುಟ್ಟಿತ್ತು. ಹೊಟ್ಟೆಗೆ ಶೂಲ ಹಾಕಿದಂತೆ ಆಯಿತು. ಎರಡು ದಿನ ಕಳೆದಳು ತರಗತಿಯಿಂದ ಹೊರಗೆ ಬರುತ್ತಿದ್ದ ಅವನನ್ನು ಅವಳೇ ಕೂಗಿದಳು. ಮಗ ತಲೆತಗ್ಗಿಸಿ ನಿಂತಿದ್ದ ಅವನನ್ನು ನೀನು ಯಾವ ಊರು? ಎಂದು ಪರಿಚಯ ಮಾಡಿಕೊಂಡು. ಇವತ್ತು ನಮ್ಮ ಮನೆಗೆ ಹೋಗೋಣ ಎಂದು ಹೇಳಿದಾಗ ರೈಲಿಗೆ ಲೇಟಾಗುತ್ತೆ ಎಂದು ಹೊರಟು ಹೋದ. ಆ ದಿನ ಮನಸ್ಸಿನಲ್ಲಿ ಸಹಿಸಲಾರದ ಯಾತನೆ ಆಗುತ್ತಿತ್ತು.

ಒಂದು ದಿನ ಚೀನಿಯನ್ನು ತರಗತಿಯಿಂದ ಕರೆಸಿ ಕಾತ್ಯಾಯಿನಿ ಮನೆಗೆ ಕರೆದುಕೊಂಡು ಹೋದಳು. ಊಟ ಕೊಟ್ಟು ನಿಮ್ಮ ತಾಯಿಯನ್ನು ನೋಡಲಿಲ್ಲವೆ, ಅವರನ್ನ ಕರೆಸಲೆ ಎಂದು ಕೇಳಿದ ಎಲ್ಲಾ ಪ್ರಶ್ನೆಗಳಿಗೆ ಇಲ್ಲ ಇಲ್ಲ ಎಂಬ ಉತ್ತರದಿಂದ ಬೇಸರವಾಯಿತು. ಮಗನ ಈ ಮಾತಿನಿಂದ ಕಾತ್ಯಾಯಿನಿಗೆ ಅರೆಮೂರ್ಚೆ ಹೋದಂತಾಯಿತು. ಅಲ್ಲಿಂದ ಅವನು ಹೊರಟು ಹೋದ ನಿಲ್ಲು ಹೋಗಬೇಡ ಎಂದು ಹೇಳಲು ನಾಲಿಗೆಯಲ್ಲಿ ತ್ರಾಣವಿರಲಿಲ್ಲ. ಅವನನ್ನು ನೋಡಿ ಕಪಿಲೆಯ ಪ್ರವಾಹಕ್ಕಿಂತಲೂ ಹೆಚ್ಚಿನ ವೇಗವಾದ ಅಳು ಹಿಂಸಾತ್ಮಕವಾಗಿ ಅವಳ ಮನಸ್ಸಿನಿಂದ ನುಗ್ಗಿ ಬಂದಿತು. ಚೀನಿ ನೀನು ನನ್ನ ಮಗ, ನನ್ನ ಹೊಟ್ಟೆಯಲ್ಲಿ ಹುಟ್ಟಿದೋನು, ನನ್ನನ್ನ ಹೀಗೆ ಕೊಲ್ಲಬಾರದು ಎಂದು ಮನಸ್ಸಿನಲ್ಲಿಯೇ ಅಂದುಕೊಂಡು ನೆಲದ ಮೇಲೆ ಉರುಳಿಕೊಂಡಳು. ಹೀಗೆ ತಾನೇ ಹೆತ್ತ ಮಗನಿಂದ ತಿರಸ್ಕಾರಕ್ಕೆ ಒಳಗಾದೆ ಎಂಬ ಮನಸ್ಥಿತಿಯಿಂದ ಆಕೆಯು ಅಪಾರವಾದ ನೋವನ್ನು ಅನುಭವಿಸಿದಳು.

ಕಾತ್ಯಾಯಿನಿಗೆ ಮಗನನ್ನು ಕಾಲೇಜಿನಲ್ಲಿ ಕಂಡು ಆದ ಸಂತೋಷವು ಮಗನಿಂದಲೇ ತಿರಸ್ಕಾರಕ್ಕೆ ಒಳಗಾದೆ ಎಂಬ ಭಾವ ಅವಳಲ್ಲೇ ಅತೀವ ದುಃಖ ಮತ್ತು ನೋವನ್ನು ಉಂಟುಮಾಡಿದವು. ತಾಯಿಯ ಮಮತೆಯನ್ನು ಕಾಣದ ಚೀನಿ ಅವಳು ಮಾಡಿದ ಕೆಲಸದಿಂದಾಗಿ. ಆ ಕಾಲೇಜನ್ನು ಬಿಟ್ಟು ಬೇರೆ ಕಾಲೇಜಿಗೆ ಸೇರಿಕೊಂಡನು. ಇದನ್ನು ತಿಳಿದ ಅವಳಿಗೆ ಮತ್ತಷ್ಟು ಆತಂಕವಾಯಿತು. ಇತ್ತ ಚೀನಿ ಕಾತ್ಯಾಯಿನಿಯೇ ತನ್ನ ತಾಯಿ ಎಂದು ತಿಳಿದು ಆಕೆ ಪಾಠ ಮಾಡುವಾಗ ಮಧ್ಯೆ ಮಧ್ಯೆ ಆಕೆಯನ್ನು ನೋಡುತ್ತಿದ್ದ. ಅನಂತರ ಆಕೆಯನ್ನು ಮಾತನಾಡಿಸಬೇಕೆಂಬ ಆಸೆ ಇದ್ದರು ಹಾಗೆ ಮಾಡಲಿಲ್ಲ. ಕಾದಂಬರಿಯಲ್ಲಿ ಕಾತ್ಯಾಯಿನಿ ಮತ್ತು ಚೀನಿಯರ ಭೇಟಿಯು ಕಾದಂಬರಿಯಲ್ಲಿ ಪ್ರಮುಖ ಸನ್ನಿವೇಶವಾಗಿ ಕಂಡುಬಂದಿದೆ. ಕಾದಂಬರಿಯ ಬೆಳವಣಿಗೆ ಈ ಸನ್ನಿವೇಶ ಕಾರಣವಾಗಿ ಕೊನೆಗರ ಚೀನಿಯನ್ನು ಕಾತ್ಯಾಯಿನಿ ನೋಡಬೇಕೆಂಬ ಹಂಬಲದಿಂದಲೇ ಹಾಸಿಗೆ ಹಿಡಿದು ಸಾಯುವಲ್ಲಿ ಚೀನಿ ಅಲ್ಲಿ ಬರುವುದರೊಂದಿಗೆ ಕಾದಂಬರಿ ಮುಕ್ತಯವಾಗುತ್ತದೆ.

ಅಧ್ಯಾಯ – 3

## ಪಾತ್ರ ಚಿತ್ರಣ

ಸಂಸ್ಕಾರ – ವಂಶವೃಕ್ಷ ಕಾದಂಬರಿಗಳು ಬ್ರಾಹ್ಮಣ ವರ್ಗದ ಸಂಪ್ರದಾಯ, ನಂಬಿಕೆ, ಆಚರಣೆಗಳನ್ನು ವ್ಯಕ್ತಪಡಿದುವಂಥ ಕಾದಂಬರಿಗಳಾಗಿವೆ. ಈ ಎರಡೂ ಕಾದಂಬರಿಗಳಲ್ಲಿ ವಸ್ತುವಿಷಯ, ಪಾತ್ರಚಿತ್ರಣಗಳಲ್ಲಿ ಕೆಲವು ಸಾಮತ್ಯಗಳು ಹಾಗೂ ಕೆಲವು ವಿರುದ್ಧ ಮನೋಧೋರಣೆಗಳು ಕಂಡು ಬರುತ್ತವೆ. ಪಾತ್ರಗಳಲ್ಲಿ ಕೆಲವು ಪ್ರಧಾನ ಪಾತ್ರಗಳು ಹಾಗೂ ಚಿಕ್ಕ ಪಾತ್ರಗಳು ಕಂಡುಬರುತ್ತವೆ. ಕಾದಂಬರಿಗಳಲ್ಲಿ ಬರುವ ಪಾತ್ರಗಳನ್ನು ಸೃಷ್ಟಿಸುವಲ್ಲಿ ಕೆಲವು ತಂತ್ರಗಳನ್ನು ಕಾದಂಬರಿಕಾರರು ಬಳಸಿಕೊಂಡಿದ್ದಾರೆ. ಬ್ರಾಹ್ಮಣ ಜಾತಿಯವರು ನಂಬಿಕೆಯನ್ನು, ಧರ್ಮದ ಸೂಕ್ಷ್ಮತೆಯನ್ನು, ಬಿಟ್ಟು ಬರಲು ಸಾಧ್ಯವಾಗದೆ ದ್ವಂದ್ವತೆಗೆ ಒಳಗಾಗುವ ಚಿತ್ರಣ ಕಾದಂಬರಿಗಳಲ್ಲಿದೆ. ಉದಾಹರಣೆ ಪ್ರಾಣೇಶಾಚಾರ್ಯ ಮತ್ತು ಶ್ರೀನಿವಾಸಶ್ರೋತ್ರಿಯವರ ಪಾತ್ರಗಳಲ್ಲೂ ಸಾಮ್ಯತೆ ಹಾಗೂ ವಿರುದ್ಧವಾದ ಧರ್ಮದ ಒಳಸೂಕ್ಷ್ಮತೆಯನ್ನು ಕಾಣಬಹುದು. ಇಂತಹ ಪಾತ್ರಗಳ ಪರಿಚಯವನ್ನು ಈ ಅಧ್ಯಾಯದಲ್ಲಿ ವಿಶ್ಲೇಷಿಸುವುದಾಗಿದೆ.

## ಸಂಸ್ಕಾರ ಕಾದಂಬರಿಯಲ್ಲಿನ ಪ್ರಮುಖ ಪಾತ್ರಗಳು

### ಪ್ರಾಣೇಶಾಚಾರ್ಯ

ಸಂಸ್ಕಾರ ಕಾದಂಬರಿಯಲ್ಲಿ ಬರುವ ಪ್ರಮುಖಪಾತ್ರ ಪ್ರಾಣೇಶಾಚಾರ್ಯ. ಕಾಶಿಗೆ ಹೋಗಿ ಸಂಸ್ಕೃತ ಓದಿ ಬಂದು ಭಾಗೀರತಿಯ ಜೊತೆ ಮದುವೆಯಾಗಿ ರೋಗಿಷ್ಠೆಯಾದ ಅವಳನ್ನು ಉಪಚರಿಸುತ್ತ ಇಪ್ಪತ್ತು ವರ್ಷಗಳಿಂದಲು ನಸುಕಿನಲ್ಲಿ ಸ್ನಾನ, ಸಂಧ್ಯಾವಂದನೆ, ಅಡಿಗೆ, ಹೆಂಡತಿಗೆ ಮದ್ದು ಮತ್ತೆ ಹೊಳೆ ದಾಟಿ ಹೋಗಿ ಗುಡಿಯ ಮಾರುತಿ ಪೂಜೆ ಇವು ಪ್ರಾಣೇಶಾಚಾರ್ಯರ ನಿತ್ಯದ ಕೆಲಸವಾಗಿತ್ತು. ರಾತ್ರಿ ವೇಳೆಯಲ್ಲಿ ಅಗ್ರಹಾರದ ಬ್ರಾಹ್ಮಣರು ಎತ್ತರದ ಜಗುಲಿಯ ಮೇಲೆ ಸೇರುತ್ತಾರೆ. ಅವರಿಗೆ ದಿನದಿನಕ್ಕೂ ಪ್ರಿಯವಾಗಿ ಪುರಾಣ ಪುಣ್ಯಕತೆಗಳ ವಾಚನ ಮಾಡುವುದು. ಮತ್ತೆ ಸಂಜೆ ಸ್ನಾನ, ಸಂಧ್ಯಾವಂದನೆ, ಹೆಂಡತಿ ಗಂಜಿ, ಮದ್ದು ಅಡಿಗೆ ಊಟ ತಿರುಗಿ ಜಗುಲಿಯಲ್ಲಿ ಬಂದು ಕುಳಿತ ಬ್ರಾಹ್ಮಣರಿಗೆ ಪ್ರವಚನ ಇದೇ ಕಾರ್ಯಗಳನ್ನು ಮಾಡುತ್ತಿರುತ್ತಾರೆ. ಕಾದಂಬರಿಯಲ್ಲಿ ಪ್ರಾಣೇಶಾಚಾರ್ಯರೇ ನಾಯಕರಂತೆ ಕಂಡು ಬರುತ್ತಾರೆ. ಹೆಂಡತಿ ಭಾಗೀರತಿ ಇನ್ನೊಂದು ಮದುವೆ ಮಾಡಿಕೊಳ್ಳುವಂತೆ ಹೇಳಿದರೂ ಕೇಳದ ಪ್ರಾಣೇಶಾಚಾರ್ಯರು ಫಲಾಪೇಕ್ಷೆ ಇಲ್ಲದೆ ಕರ್ಮಮಾಡು ಎನ್ನಲಿಲ್ಲವೇ ಭಗವಂತ? ಮುಕ್ತಿ ಮಾರ್ಗದಲ್ಲಿರುವ ತನ್ನನ್ನು ಪರೀಕ್ಷಸಲೆಂದು ಬ್ರಾಹ್ಮಣ ಜನ್ಮ ಕೊಟ್ಟು ಇಂತಹ ಸಂಸ್ಕಾರಕ್ಕೆ ನನ್ನನ್ನು ಅವತೊಡಗಿದ್ದಾನೆಂದು ಹೇಳುತ್ತಾನೆ. ಹೀಗೆ ಅಗ್ರಹಾರದ ಬ್ರಾಹ್ಮಣರಿಗೆ ಪ್ರವಚನ ಹೇಳುತ್ತ ಗುಡಿಯ ಮಾರುತಿಗೆ ಪೂಜೆ ಸಲ್ಲಿಸುವ ಆಚರಣೆಯನ್ನು ನಡೆಸುತ್ತ ಬಂದ ಪ್ರಾಣೇಶಾಚಾರ್ಯರಿಗೆ ಹೊಲೆಯರ ಚಂದ್ರಿ ಬಂದು ನಾರಣಪ್ಪನ ಸಾವಿನ ಸುದ್ಧಿ ತಿಳಿಸುತ್ತಾಳೆ. ಇಡೀ ಅಗ್ರಹಾರದ ಜನರಿಗೆ ವಿಚಾರ ತಿಳಿಸಿ ಮುಂದಿನ ಕಾರ್ಯಕ್ರಮವನ್ನು ಯಾರು

ಮಾಡಬೇಕೆಂದು ಬ್ರಾಹ್ಮಣರೆಲ್ಲರು ಪ್ರಾಣೇಶಾಚಾರ್ಯರ ಬಳಿಗೆ ಬಂದು ಚರ್ಚಿಸುವಾಗ, ಆತನ ಶವಸಂಸ್ಕಾರದ ವಿಷಯವಾಗಿ ಉದ್ಭವಿಸುವ ಸಂದಿಗ್ಧತೆಗಳನ್ನು ನಿವಾರಿಸಲು ಎಲ್ಲರು ಪ್ರಾಣೇಶಾಚಾರ್ಯರನ್ನೇ ಕೇಳಿಕೊಂಡಾಗ, ನಾರಣಪ್ಪ ಬ್ರಾಹ್ಮಣ್ಯವನ್ನು ಬಿಟ್ಟರು ಬ್ರಾಹ್ಮಣ್ಯ ನಾರಣಪ್ಪನನ್ನು ಬಿಟ್ಟಿಲ್ಲ. ಹಾಗೆ ನೋಡಿದರೆ ಬ್ರಾಹ್ಮಣರಲ್ಲದವರು ಅವನ ಶವಸಂಸ್ಕಾರ ಮಾಡುವಂತಿಲ್ಲ. ಬ್ರಾಹ್ಮಣರು ಮಾಡಿದರೆ ಅವನು ಬ್ರಾಹ್ಮಣ ವಿರೋಧಿ ಚಟುವಟಿಕೆಗಳನ್ನು ಮಾಡಿದ್ದಾನೆ. ಅಲ್ಲದೆ ಆತನಿಗೆ ಮಕ್ಕಳಾರು ಇಲ್ಲ. ಹೀಗೆ ನಾರಣಪ್ಪನ ಸಾವಿನಿಂದ ಇಡೀ ಅಗ್ರಹಾರದವರೆಲ್ಲ ಪ್ರಾಣೇಶಾಚಾರ್ಯರ ಉತ್ತರಕ್ಕಾಗಿ ಕಾದು, ಯಾರು ಊಟ ಮಾಡದೆ ಕುಳಿತಿರುವಾಗ, ಅನೇಕ ಶಾಸ್ತ್ರಗ್ರಂಥಗಳನ್ನು ನೋಡಿ ಪರಿಹಾರ ಸಿಗದೆ ಮತ್ತೆ ದೀರ್ಘವಾದ ಅಧ್ಯಯನ ನಡೆಸಿ ಮತ್ತೆ ಸಿಗದೆ ಮಾರುತಿ ಗುಡಿಗೆ ಪರಿಹಾರ ಹುಡುಕಲು ಹೊರಟಾಗ, ಚಂದ್ರಿಯು ಅಲ್ಲಿಗೆ ಬಂದಿರುತ್ತಾಳೆ. ಚಂದ್ರಿಯ ಜೊತೆಗೆ ಆಕಸ್ಮಿಕ ಸಂಬಂಧವನ್ನು ಹೊಂದಿ ತಾನು ಧರ್ಮದ ಸೂಕ್ಷ್ಮತೆಯನ್ನು, ಪರಿಹಾರವನ್ನು ಹೇಳುವ ಹಕ್ಕು ನನಗಿಲ್ಲವೆಂದು ಹೇಳಿ ತನ್ನ ಹೆಂಡತಿ ಭಾಗೀರತಿ ಸತ್ತ ನಂತರ ಆತ ಚಂದ್ರಿಯನ್ನು ಹುಡುಕಿಕೊಂಡು ಹೋಗುವುದು, ದಾರಿಯಲ್ಲಿ ಮಾಲೇರ ಪುಟ್ಟನ ಭೇಟಿ, ಸಹವಾಸ ಅನಂತರ ಆತನ ಮೂಲಕ ಪದ್ಮಾವತಿಯ ಮನೆಗೆ ಭೇಟಿ, ನಂತರ ದೇವಸ್ಥಾನದ ಊಟ ಈ ರೀತಿಯ ಸಂದಿಗ್ಧತೆಗೆ ಒಳಗಾಗಿ ಮತ್ತೆ ಆತನಿಂದ ಬೇರ್ಪಟ್ಟು ಮತ್ತೆ ತನ್ನ ಊರಿನತ್ತ ಪ್ರಯಾಣ ಬೆಳೆಸುತ್ತಾನೆ. ಇಲ್ಲಿ ಕಾದಂಬರಿಯ ನಾಯಕನಾಗಿ ಪ್ರಾಣೇಶಾಚಾರ್ಯರು ಕಂಡು ಬರುತ್ತಾನೆ. ಧರ್ಮದ ಸೂಕ್ಷ್ಮತೆಯನ್ನು ಬಹಳ ಕಟ್ಟುನಿಟ್ಟಾಗಿ ಪಾಲಿಸಿಕೊಂಡು ಬಂದ ಪ್ರಾಣೇಶಾಚಾರ್ಯನು, ಚಂದ್ರಿಯ ಆಕಸ್ಮಿಕ ಸಮಾಗಮದಿಂದಾಗಿ ದೈಹಿಕ ಸಹಜ ಆಸೆಗಳು ಧರ್ಮ, ನಂಬಿಕೆ, ಸಂಪ್ರದಾಯ ಹೇಗೆ? ಮುರಿದು ಬೀಳಿಸುತ್ತವೆ ಎನ್ನುವುದಕ್ಕೆ ಪ್ರಾಣೇಶಾಚಾರ್ಯರು ಉತ್ತರವಾಗಿ ನಿಲ್ಲುತ್ತಾರೆ. ಕಾದಂಬರಿಯಲ್ಲಿ ಪ್ರಾಣೇಶಾಚಾರ್ಯನ ಮೂಲಕ ಕಾದಂಬರಿಕಾರರು ತಮ್ಮ ಪ್ರಗತಿಪರ ವ್ಯಕ್ತಿತ್ವವನ್ನು ತೋರಿಸುವ ತಂತ್ರವನ್ನು ಬಳಸಿಕೊಂಡಿದ್ದಾರೆ. ಹಾಗೂ ಹಳೆಯ ಸಂಪ್ರದಾಯಗಳನ್ನು ಒರಗೆ ನೋಡಿ ಸತ್ವಹೀನವಾದವುಗಳನ್ನು ಕಳಚಿ ಒಗೆದು ದ್ವಂದ್ವಕ್ಕೆ, ಘರ್ಷಣೆಗೆ, ದುಃಖಕ್ಕೆ ಹೆದರದೆ ಧೈರ್ಯದಿಂದ, ಪ್ರಾಮಾಣಿಕತೆಯಿಂದ, ಹೊಸ ಮೌಲ್ಯಗಳನ್ನು ತರುವ ಪ್ರಯತ್ನವನ್ನು ಪ್ರಾಣೇಶಾಚಾರ್ಯರ ಪಾತ್ರದ ಮೂಲಕ ಮಾಡಿದ್ದಾರೆ.

**<u>ನಾರಣಪ್ಪ</u>**

ಸಂಸ್ಕಾರ ಕಾದಂಬರಿಯಲ್ಲಿ ಪ್ರಮುಖ ಪಾತ್ರ ನಾರಣಪ್ಪನದು. ಇಡೀ ಕಾದಂಬರಿಯ ವಸ್ತುವೇ ನಾರಣಪ್ಪನ ಸಾವಿನ ವಿಚಾರ ಹಾಗೂ ಆತನ ಶವಸಂಸ್ಕಾರದ ದ್ವಂದ್ವತೆ ಇಡೀ ಅಗ್ರಹಾರವನ್ನು ಯಾವರೀತಿಯ ತಲ್ಲಣವಾಗಿಸುವಂತೆ ಮಾಡಿತು ಎನ್ನುವುದನ್ನು ಕಾಣಬಹುದು. ಈತ ಬ್ರಾಹ್ಮಣನಾಗಿ ಹುಟ್ಟಿ ಬ್ರಾಹ್ಮಣರ ನಂಬಿಕೆ, ಸಂಪ್ರದಾಯ, ಆಚರಣೆ, ಧರ್ಮದ ವಿಚಾರಗಳನ್ನು ಬಿಟ್ಟು ಆಧುನಿಕ ಜಗತ್ತಿನ ಮನುಷ್ಯನಾಗಿ ಬಾಳಿ ಬದುಕಿದವನು. ಬ್ರಾಹ್ಮಣ ಧರ್ಮದಲ್ಲಿದ ಅರ್ಥಹೀನ ಆಚರಣೆಗಳನ್ನು ಬದಿಗೊತ್ತಿ

ಅವೆಲ್ಲವನ್ನು ಮುರಿದು ಕೆಳ ಜಾತಿಯ ಚಂದ್ರಿಯ ಜೊತೆ ದೈಹಿಕ ಸಂಬಂಧವನ್ನು ಹೊಂದಿ ಆಕೆಯ ಜೊತೆಯಲ್ಲಿ ಅವರ ಕೇರಿಯಲ್ಲಿ ವಾಸಮಾಡುತ್ತಿರುತ್ತಾನೆ. ಈತ ಇಡೀ ಅಗ್ರಹಾರದ ಬ್ರಾಹ್ಮಣರಿಗೆ ಕಂಟಕಪ್ರಾಯನಾಗಿದ್ದನು. "ಬದುಕಿನಲ್ಲಿ ವೈರಿ, ಸತ್ತು ಅನ್ನ ಕಂಟಕ, ಶವವಾಗಿ ಇನ್ನೂ ಸಮಸ್ಯೆ" ಎಂದು ಆತನ ಷಡಕನಾದ ಉಡುಪಿಯ ಲಕ್ಷಣಾಚಾರ್ಯ ಆತನನ್ನು ಶಪಿಸಿದನು. ನಂತರ ಮಧ್ಯಪಾನ ಮಾಡುತ್ತಿದ್ದ ಹೊಲೆಯ ಚಂದ್ರಿಯನ್ನು ಕಟ್ಟುಕೊಂಡ ತನ್ನ ಹೆಂಡತಿ ಸತ್ತರು ಅವಳ ಸಂಸ್ಕಾರವನ್ನು ಮಾಡಲಿಲ್ಲ. ತನ್ನ ಅಪ್ಪ ಅಮ್ಮರಿಗೆ ಶ್ರಾದ್ಧವನ್ನು ಮಾಡಲಿಲ್ಲ, ತಲೆತಲಾಂತರದಿಂದಲೂ ಬಂದಿದ್ದ ಸಾಲಿಗ್ರಾಮವನ್ನು ನೀರಿಗೆ ಎಸೆದ, ತುರುಕರನ್ನು ಕರೆದುಕೊಂಡು ಮಾಂಸವನ್ನು ತಿನ್ನುತ್ತಿದ್ದ. ಕೇಳಿದ ಬ್ರಾಹ್ಮಣರನ್ನು ಬೈದು ಬಿಡುತ್ತಿದ್ದ, ನಾರಣಪ್ಪ ಸತ್ಕುಲಪ್ರಸೂತನಾದ ಬ್ರಾಹ್ಮಣ ಜಾತಿಯಲ್ಲಿ ಹುಟ್ಟಿದರೂ ಬ್ರಾಹ್ಮಣನಾಗಿ ನಡೆದುಕೋಳ್ಳಲಿಲ್ಲ. ಅಗ್ರಹಾರಕ್ಕೆ ಅಪಕೀರ್ತಿ ತಂದ ಈತ ಬ್ರಾಹ್ಮಣ್ಯವನ್ನು ಬಿಟ್ಟರು ಬ್ರಾಹ್ಮಣ್ಯ ಈತನನ್ನು ಬಿಡಲಿಲ್ಲ. ಈತನನ್ನು ನಾವು ಶಾಸ್ತ್ರರೀತಿ ಬಹಿಷ್ಕಾರ ಹಾಕಲಿಲ್ಲ ಅವನು ಬ್ರಾಹ್ಮಣನಾಗಿಯೇ ಈಗ ಸತ್ತಿದ್ದಾನೆ. ಹಾಗಾಗಿ ಬ್ರಾಹ್ಮಣರಲ್ಲದವರು ಈತನ ಶವಸಂಸ್ಕಾರ ಮಾಡುವಂತಿಲ್ಲ. ಗರುಡಾಚಾರ್ಯನ ಮಗ ಮನೆ ಬಿಟ್ಟು ಮಿಲಿಟರಿ ಸೇರಲು ಈತನೇ ಕಾರಣ ಎಂದು ಎಲ್ಲರು ಈತನನ್ನು ಜರಿಯುತ್ತಿದ್ದಾರೆ. ಅಲ್ಲದೆ ಪಾರಿಜಾರಪುರದ ಬ್ರಾಹ್ಮಣರ ಜೊತೆಗೆ ಉತ್ತಮ ಸಂಬಂಧವನ್ನು ಹೊಂದಿದ್ದ, ಬ್ರಾಹ್ಮಣ ಧರ್ಮವನ್ನು ಜರಿದು, ಪಂಚಮರನ್ನು ದೇವಸ್ಥಾನಕ್ಕೆ ಬಿಡಬೇಕು, ಎಂದೆಲ್ಲ ಏನೇನೂ ಅಸಂಬದ್ಧವಾಗಿ ಪ್ರಲಾಪಿಸಿದ. ನಿಮ್ಮ ಧರ್ಮ ನಿಮಗೆ ಇರಲಿ ಇರುವುದು ಒಂದು ಆಯುಷ್ಯ, ನಾನು ಅದನ್ನು ಅನುಭವಿಸಬೇಕು. ಈ ಭೌತ ಶರೀರ ಶಾಶ್ವತವಲ್ಲ ಎಂದು ಬೋಧಿಸಿದ. ಹೀಗೆ ಇಡೀ ಕಾದಂಬರಿಯ ಕೇಂದ್ರ ಪಾತ್ರವಾಗಿ ಪ್ರಗತಿಪರ ಮನೋಭಾವದ ವ್ಯಕ್ತಿತ್ವದ ರೂಪದಲ್ಲಿ ಕಾದಂಬರಿಯಲ್ಲಿ ನಾರಣಪ್ಪನ ಪಾತ್ರ ಕಂಡು ಬರುತ್ತದೆ. ಅನಂತಮೂರ್ತಿಯವರ ಪ್ರಗತಿಪರ ದೃಷ್ಟಿ, ಜಾತಿಯ ವ್ಯವಸ್ಥೆ ಚಿತ್ರಣ, ಮಾನವೀಯ ಸಂಬಂಧದ ನೆಲೆಗಳನ್ನು ನಾರಣಪ್ಪನ ಪಾತ್ರದ ಮೂಲಕ ತರುವಂತ ಪ್ರಯತ್ನಮಾಡಿದ್ದಾರೆ. ಅಲ್ಲದೆ ಚಂದ್ರಿಯೊಂದಿಗಿನ ಸಂಬಂಧ, ರೋಗಕ್ಕೆ ತುತ್ತಾಗಿ ಸಾಯುವುದು ಇಡೀ ಅಗ್ರಹಾರಕ್ಕೆ ಪ್ಲೇಗ್ ರೋಗ ಹರಡುವುದಕ್ಕೆ ಈತನ ಈ ರೀತಿಯ ವರ್ತನೆಯೇ ಕಾರಣವೆಂದು ತಿಳಿಯುವ ಬ್ರಾಹ್ಮಣರಲ್ಲಿ ಧರ್ಮದ ಗಡಿಯನ್ನು ದಾಟಿ ಬರುವ ಮನೋಭಾವ ಇತರ ಯಾವ ಪಾತ್ರಗಳಲ್ಲು ಬರುವುದಿಲ್ಲ. ಆದರೆ ಪ್ರಾಣೇಶಾಚಾರ್ಯರ - ಚಂದ್ರಿಯ ಸಂಬಂಧ ಅವಳನ್ನು ಹುಡುಕಿಕೊಂಡು ಹೋಗುವ ಪ್ರಾಣೇಶಾಚಾರ್ಯರ ಮನದಲ್ಲಿ ಸುಳಿಯುವುದು. ಇವೆಲ್ಲ ತಂತ್ರವನ್ನು ಕಾದಂಬರಿಯಲ್ಲಿ ತಂದು ನಾರಣಪ್ಪನ ಪಾತ್ರದ ಮೂಲಕ ಸಾಂಪ್ರದಾಯಿಕ ಆಚರಣೆಗಳನ್ನು ತಿರಸ್ಕರಿಸುವಂತೆ ಕಾದಂಬರಿಕಾರರು ನಾರಣಪ್ಪನು ಒಬ್ಬ ಪ್ರತಿಭಟನೆಯ ಸಂಕೇತವಾಗಿ ಚಿತ್ರಿಸಿದ್ದಾರೆ.

**ಚಂದ್ರಿ**

ಸಂಸ್ಕಾರ ಕಾದಂಬರಿಯ ಪ್ರಮುಖ ಪಾತ್ರಗಳಲ್ಲಿ ಚಂದ್ರಿಯ ಪಾತ್ರವು ಮುಖ್ಯವಾದ ಪಾತ್ರವಾಗಿದೆ. ಈಕೆ ಕೆಳಜಾತಿಯ ಹೆಂಗಸು, ಈಕೆಯ ಜೊತೆ ಬ್ರಾಹ್ಮಣನಾದ ನಾರಣಪ್ಪ ಸಂಬಂಧವನ್ನು ಹೊಂದಿರುತ್ತಾನೆ, ಇಡೀ ಅಗ್ರಹಾರದ ಬ್ರಾಹ್ಮನರೆಲ್ಲನ್ನು ವಿರೋಧಿಸಿ ಚಂದ್ರಿಯ ಜೊತೆಗಿನ ನಾರಣಪ್ಪನ ಸಂಬಂಧದಿಂದ ಚಂದ್ರಿಯನ್ನು ಕಂಡರೆ ಬ್ರಾಹ್ಮಣರಿಗೆ ಆಗುತ್ತಿಲ್ಲ. ಕಾದಂಬರಿಕಾರರು ಚಂದ್ರಿಯನ್ನು ಅವಳ ದೇಹಸಿರಿಯನ್ನು ಕಾದಂಬರಿಯಲ್ಲಿ ವರ್ಣಿಸಿ ಎಂತಹ ವ್ಯಕ್ತಿಯನ್ನು ಇಷ್ಟಪಡುವ ಹೆಣ್ಣೆಂದು ಬಣ್ಣಿಸಲಾಗಿದೆ. ಪ್ರಾಣೇಶಾಚಾರ್ಯರಿಗೆ ನಾರಣಪ್ಪನ ಸಾವಿನ ಸುದ್ದಿಯನ್ನು ಮುಟ್ಟಿಸುವ ಈಕೆ ಆತನ ಶವಸಂಸ್ಕಾರದ ವಿಚಾರವಾಗಿ ನಡೆಯುವ ಚರ್ಚೆಯ ಕೇಳುತ್ತ ಅಲ್ಲೆ ಇರುತ್ತಾಳೆ. ಬ್ರಾಹ್ಮಣರ ಅಗ್ರಹಾರದ ಹೆಂಗಸರ ಕೆಂಗಣ್ಣಿಗೆ ಗುರಿಯಾಗುತ್ತಾಳೆ. ಇವಳಿಗಾಗಿ ನಾರಣಪ್ಪ ಸಾಲಿಗ್ರಾಮವನ್ನು ಎಸೆದು ಮಧ್ಯ, ಮಾಂಸ ಮಾಡಿರುವುದರಲ್ಲಿ ಆಶ್ಚರ್ಯವಿಲ್ಲವೆಂದೆಲ್ಲ ಹೇಳುತ್ತಾರೆ. ನಾರಣಪ್ಪನ ಶವಸಂಸ್ಕಾರಕ್ಕೆ ಸಂಬಂಧಿಸಿದಂತೆ ಚಂದ್ರಿ ತನ್ನ ನಾಲ್ಕೆಳೆ ಬಂಗಾರದ ಸರ, ಕಡಗ, ಬಳೆಗಳನ್ನು ಪ್ರಾಣೇಶಾಚಾರ್ಯರ ಎದುರಿಗಿಟ್ಟಳು. ಚಂದ್ರಿಯೇ ಕೊನೆಗೆ ಮುಸಲ್ಮಾನನ ಸಹಾಯದಿಂದ ಸಂಸ್ಕಾರ ಮಾಡಿಸುತ್ತಾಳೆ.

ಕಾದಂಬರಿಯಲ್ಲಿ ಚಂದ್ರಿಯ ಪಾತ್ರ ವಿಶೇಷವಾದುದು ಈಕೆ ಬ್ರಾಹ್ಮಣ ಸಮಾಜದ ದೃಷ್ಟಿಯಲ್ಲಿ ಇವಳೊಬ್ಬ ಅಸ್ಪೃಶ್ಯಳು, ಅಸಂಸ್ಕೃತಳು, ನೀತಿಕೆಟ್ಟವಳು ಇಂತಹ ನೀತಿಕೆಟ್ಟವಳ ಜೊತೆ ಸಂಬಂಧ ಹೊಂದಿ ತಾನು ನೀತಿಕೆಟ್ಟವನು ಜಾತಿಕೆಟ್ಟವನು ನಾರಣಪ್ಪ. ಈಕೆ ವೇಶ್ಯಾವೃತ್ತಿಯನ್ನು ಮಾಡುತ್ತಿದ್ದರೂ ಅವಳಲ್ಲಿ ನೈತಿಕತೆಗೇನೂ ಅಭಾವವಿಲ್ಲ. ತನ್ನ ಮತ್ತು ನಾರಣಪ್ಪನ ಸಂಬಂಧ ಅನೈತಿಕವಲ್ಲ ಎಂದು ಭಾವಿಸಿದ್ದಳು. ನಾರಣಪ್ಪನ್ನು ಗಂಡನೆಂದೇ ಭಾವಿಸಿ, ಆತ ತೀರಿಕೊಂಡಾಗ ಅವನ ಅಂತ್ಯಸಂಸ್ಕಾರಕ್ಕೆ ಜವಾಬ್ದಾರಿಯನ್ನು ಹೊಂದಿ ಖರ್ಚಿಗೆ ತನಗೆ ಬಹುಮಾನವಾಗಿ ಕೊಟ್ಟಂತಹ ಆಭರಣಗಳನ್ನು ಕೊಡಲು ಮುಂದಾಗುತ್ತಾಳೆ. ಈ ಆಭರಣಗಳು ಬ್ರಾಹ್ಮಣರಾದ ನಾರಣಪ್ಪನ ಸಂಬಂಧಿಗಳಿಗೆ ಆಸೆಯನ್ನು ಹುಟ್ಟಿಸಿದರು ಅವರು ಅದನ್ನ ಪ್ರಕಟಿಸುವುದಿಲ್ಲ. ಬ್ರಾಹ್ಮಣರು ಸಂಸ್ಕಾರಕ್ಕೆ ಮುಂದೆ ಬಾರದಿದ್ದಾಗ, ಪ್ರಾಣೇಸಚಾರ್ಯರು ಸಮಸ್ಯೆಗೆ ಪರಿಹಾರ ನೀಡಲು ಅಸಮರ್ಥರಾದಾಗ, ತನ್ನ ಕರ್ತವ್ಯವೆಂದೆ ತಿಳಿದು ಚಂದ್ರಿ ತನ್ನ ಮುಸಲ್ಮಾನ ಗೆಳೆಯ ಸಹಾಯ ಪಡೆದು ವಿಧಿವತ್ತಾಗಿ, ಸಂಸ್ಕಾರ ಮಾಡುತ್ತಾಳೆ. ಇದು ಚಂದ್ರಿಯ ನೈತಿಕ ಜವಾಬ್ದಾರಿಗೆ ಒಂದು ಉದಾಹರಣೆಯಾಗಿದೆ.

ನಾರಣಪ್ಪನ ಸಾವು ಪ್ರಾಣೇಶಾಚಾರ್ಯರಿಗೆ ಒಂದು ಸವಾಲಗಿ ನಿಲ್ಲುತ್ತದೆ. ದಾರಿ ತಪ್ಪಿದ ಅವನನ್ನು ಸರಿದಾರಿಗೆ ತರಲು ಪ್ರಯತ್ನಿಸಿದ ಪ್ರಾಣೇಶಾಚಾರ್ಯರಿಗೆ ಅವನ ಸಾವು ಕೂಡ ಸವಲಾಗಿ ನಿಂತಿದೆ. ಎಷ್ಟೇ ತಾಳೆಗರಿಗಳನ್ನು, ಗ್ರಂಥಗಳನ್ನು ಆಮೂಲಾಗ್ರವಾಗಿ ಶೋಧಿಸಿದರೂ ಸಮಸ್ಯೆಗೆ ಧರ್ಮಶಾಸ್ತ್ರದಲ್ಲಿ ಏನೂ ಪರಿಹಾರ ಸಿಗದಿದ್ದಾಗ, ಮಾರುತಿ ಗುಡಿಗೆ ಪ್ರಸಾದ ಕೇಳಲು ಹೋಗಿ ರಾತ್ರಿ ಪೂರ್ತಿಯಾಗಿ ಬೇಡಿಕೊಂಡರು, ಪ್ರಸಾದ ಕರಿಣಿಸುವುದಿಲ್ಲ. ಮಾನಸಿಕವಾಗಿ ಮತ್ತು ದೈಹಿಕವಾಗಿ ಸೋತುಹೋದ

ಅವರಿಗೆ ಚಂದ್ರಿ ಬೇಟಿಯಾದುದ್ದು ಕಾದಂಬರಿಗೆ ಒಂದು ಹೊಸ ತಿರಿವು ನೀಡುತ್ತದೆ. ಉಪವಾಸದಿಂದ ನರಳುತಿದ್ದ ಅವರಿಗೆ ಚಂದ್ರಿ ನೀಡಿದ ಬಾಳೆಹಣ್ಣು, ಹೆಂಡತಿ ಖಾಯಿಲೆಯಿಂದಾಗಿ ಲೈಂಗಿಕ ಸುಖದಿಂದ ವಂಚಿತರಾದ ಅವರಿಗೆ ಅವಳ ದೇಹ ಸುಖವನ್ನು ನೀಡುತ್ತದೆ. ಮಾನವ ಅಗತ್ಯವಾದ ಹಸಿವು ಮತ್ತು ಕಾಮತೃಷೆಗಳಿಗೆ ಇಲ್ಲಿ ಹೇಗೆ ತೃಪ್ತಿ ದೊರಕಿತು ಎಂಬುದು ಸಂಕೇತಿಕವಾಗಿ ವ್ಯಕ್ತವಾಗಿದೆ. ಅವಳೊಡನೆ ಕೂಡಿ ಪ್ರಾಣೇಶಾಚಾರ್ಯರು ಎಂದು ಕಾಣದ ಸುಖಾನುಭವ ಪಡೆಯುತ್ತಾರೆ. ಅವರಿಗೆ ಆ ಕ್ಷಣದಲ್ಲಿ ಯಾವ ಪಾಪಪ್ರಜ್ಞೆಯು ಕಾಣುವುದಿಲ್ಲ. ದೂರ್ವಾಸಪುರದಲ್ಲಿ ಧರ್ಮ ಪಾಲನೆ ನಡೆಸಿಕೊಂಡು ಬಂದ ಅವರಿಗೆ ಅಗ್ರಹಾರದಲ್ಲಿ ಅವರಿಗಿದ್ದ ಗೌರವ ಸ್ಥಾನವನ್ನು ಕಳಚಿದಂತೆ ಆಗುತ್ತದೆ. ಅನೇಕ ದ್ವಂದ್ವತೆಗಳು ಉದ್ಭವಿಸುತ್ತವೆ. ಚಂದ್ರಿಗೆ ಯಾವ ರೀತಿಯ ಅಪರಾಧ ಮಾಡುತ್ತಿದ್ದೇನೆಂಬ ಭಾವವೂ ಮೂಡುವುದಿಲ್ಲ. ಅವರಿಬ್ಬರ ಮಿಲನ ಆ ಕ್ಷಣದಲ್ಲಿ ದೋಷರಹಿತವಾಗಿಯೇ ಕಾಣುತ್ತದೆ. ಅವಳ ಸಹವಾಸದಿಂದ ಪ್ರಾಣೇಶಾಚಾರ್ಯರು ಬದುಕನ್ನೆ ನೋಡುವ ದೃಷ್ಟಿಯೇ ಬದಲಾಗುತ್ತದೆ. ಬಹಳಷ್ಟು ಬದಲಾಗಿ ಅವಳೊಡನೆ ಸಂಸಾರ ಮಾಡುವ ಆಸೆಯಾಗುತ್ತದೆ. ಚಂದ್ರಿಯ ಜೊತೆ ಸಂಬಂಧ ಬೆಳೆಸಿ ಮನೆಗೆ ಬಂದಾಗ ಹೆಂಡತಿ ಪ್ಲೇಗಿನಿಂದ ತೀರಿಕೊಂಡುದು ಕಾದಂಬರಿಗೆ ಒಂದು ವಿಶೇಷ ಅರ್ಥ ನೀಡುತ್ತದೆ. ಚಂದ್ರಿಯ ಸುಖ ಅನುಭವಿಸಿದ ಮೇಲೆ ಅವರ ಬಾಳಿನಲ್ಲಿ ಆ ಹೆಂಡತಿಯ ಅವಶ್ಯಕತೆಯೇ ಇರುವುದಿಲ್ಲ. ಹೀಗೆ ನಾರಣಪ್ಪನ ಜೊತೆಗಿನ ಸಂಬಂಧ ಹಾಗೂ ಪ್ರಾಣೇಶಾಚಾರ್ಯರ ಕಾಮತೃಷೆಯನ್ನ ಕೆರಳಿಸಿದ ಚಂದ್ರಿ ತನ್ನ ಪ್ರಿಯಕರನ ಶವ ಸಂಸ್ಕಾರಗಳನ್ನು ಏರ್ಪಡಿಸಿ, ಕಾದಂಬರಿಯಿಂದ ಇದ್ದಕ್ಕಿದ್ದಂತೆ ನಿರ್ಗಮಿಸಿದರೂ ಅವಳು ಪ್ರಾಣೇಶಾಚಾರ್ಯರ ಬದುಕಿನ ಮೇಲೆ ಪ್ರಭಾವ ಬೀರಿದ ಪ್ರಮುಖ ಪಾತ್ರವಾಗಿ ಕಾದಂಬರಿಯ ತುಂಬಾ ಮಹತ್ವ ಸ್ಥಾನ ಪಡೆಯುತ್ತದೆ.

**ಲಕ್ಷ್ಮಣಾಚಾರ್ಯ**

ಸಂಸ್ಕಾರ ಕಾದಂಬರಿಯಲ್ಲಿ ಬರುವ ಮತ್ತೊಂದು ಪಾತ್ರ ಉಡುಪಿಯ ಲಕ್ಷ್ಮಣಾಚಾರ್ಯ. ಈತ ಸಂಬಂಧದಲ್ಲಿ ನಾರಣಪ್ಪನಿಗೆ ಷಡಕನಾಗಬೇಕು. ಈತನ ಹೆಂಡತಿಯ ತಂಗಿಯನ್ನು ಕೊಟ್ಟು ಮದುವೆ ಮಾಡಲಾಗಿತ್ತು, ನಾರಣಪ್ಪನ ಶವಸಂಸ್ಕಾರ ಮಾಡಬೇಕಾದ ವಿಚಾರದಲ್ಲಿ ಪ್ರಾಣೇಶಾಚಾರ್ಯರು ಲಕ್ಷ್ಮಣಾಚಾರ್ಯನ್ನು ಕೇಳಿದಕ್ಕೆ ಧರ್ಮದ ಸೂಕ್ಷ್ಮತೆ ನಮಗೇನು ಗೊತ್ತು? ಆಚಾರ್ಯರಾದ ತಾವು ಹೇಳಿದಂತೆ ನಾವು ಎಂದು ಹೇಳುತ್ತಾನೆ. ಗರುಡಾಚಾರ್ಯ ಹೇಳಿದಂತೆ ನಾರಣಪ್ಪ ಕೀಳು ಜಾತಿಯ ಹೆಣ್ಣೊಂದರ ಸಂಪರ್ಕ ಹೊಂದಿದ್ದಾನೆ, ಅವಳು ಮಾಡಿದ ಊಟವನ್ನು ಮಾಡುತ್ತಿದ್ದ, ಮಧ್ಯಪಾನ, ಮಾಂಸಹಾರವನ್ನು ಮಾಡುತ್ತಿದ್ದ, ತಾಳಿ ಕಟ್ಟಿದ ಹೆಂಡತಿಯನ್ನು ಬಿಟ್ಟ, ಸತ್ತ ಅವಳ ಸಂಸ್ಕಾರವನ್ನು ಮಾಡಲಿಲ್ಲ ಅದೂ ಹೋಗಲಿ ಎಂದರೆ ಸ್ವತಃ ಅವನ ತಂದೆ-ತಾಯಿಯರ ಶ್ರಾದ್ಧವನ್ನು ಮಾಡಲಿಲ್ಲ, ಬ್ರಾಹ್ಮಣರ ಎದುರಿಗೆ ತಲೆ ತಲಾಂತರದಿಂದ ಬಂದಂತಹ ಸಾಲಿಗ್ರಾಮವನ್ನು ನೀರಿಗೆ ಎಸೆದ ತುರುಕರನ್ನು ಕರೆದುಕೊಂಡು ಅಪ್ಪೇಯಮಾನವಾದ ಅಭಕ್ಷ್ಯ ಭೋಜನವನ್ನು ಮಾಡಿದ. ಏಕಯ್ಯ? ಎಂದು ಹಿತವನ್ನು ಹೇಳಹೋದರೆ

ನಮ್ಮನ್ನು ಹೀನಾಮಾನ ಬೈದ. ಅವನು ಜೀವವಿರುವಷ್ಟು ಕಾಲ ನಮ್ಮನ್ನು ಹೆದರಿಕೊಂಡು ಇರುವಂತೆ ಮಾಡಿದ ಎಂದು ನಾರಣಪ್ಪನ ವಿಚಾರವಾಗಿ ಹೇಳಿದಾಗ, ಹೆಂಡತಿ ಅನುಸೂಯ ಸರಿಯಾಗಿ ಹೇಳಿದನೆಂದು ಆನಂದಿಸಿ ಚಂದ್ರಿಯನ್ನು ಕಂಡು ಶಪಿಸಿದಳು. ಅಗ್ರಹಾರದ ಎಲ್ಲಾ ಬ್ರಾಹ್ಮಣರ ಮುಂದೆ ಚಂದ್ರಿ ತನ್ನ ನಾಲ್ಕೆಳೆ ಬಂಗಾರದ ಸರ, ಕಡಗ, ಬಳೆಗಳನ್ನು ಪ್ರಾಣೇಶಾಚಾರ್ಯರಿಗೆ ಎದುರಿಗಿಟ್ಟು ಶವಸಂಸ್ಕಾರದ ಖರ್ಚಿಗೆ ತೆಗೆದುಕೊಳ್ಳಿ ಎಂದಾಗ ಎಲ್ಲಾ ಹೆಂಗಸು ಎರಡು ಸಾವಿರ ರೂಪಾಯಿ ಚಿನ್ನವಾದರೂ ಇದೆ ಎಂದು ಲೆಕ್ಕಹಾಕಿದರು. ಲಕ್ಷ್ಮಣಾಚಾರ್ಯನ ಮನಸ್ಸಿನಲ್ಲಿ ಚಿನ್ನದ ಬಗ್ಗೆ ಆಸೆ ಇದ್ದರೂ ಬ್ರಾಹ್ಮಣತ್ವ ಎಲ್ಲಿ ನಾಶವಾದೀತು ಎಂಬ ಭಯವಾಯಿತು. ಪ್ರತಿಯೊಬ್ಬನ ಮನಸ್ಸಿನಲ್ಲಿ ಹೊಳೆದ ಪ್ರಶ್ನೆ ನಾವಲ್ಲದೆ ಬೇರೆ ಬ್ರಾಹ್ಮಣರು ಸಂಸ್ಕಾರ ಮಾಡಿ ಚಿನ್ನವನ್ನು ತಮ್ಮನ ಹೆಂಡತಿಯ ಕೊರಳಿಗೆ ಹಾಕಿದರೆ ಎಂಬ ದಿಗಿಲೂ ಆಯಿತು. ಲಕ್ಷ್ಮಣಾಚಾರ್ಯನ ಅಳಿಯನನ್ನು ನಾರಣಪ್ಪ ಬುದ್ಧಿಗೆ ಅವನನ್ನು ಹಾಳೂ ಮಾಡಿದನೆಂಬ ಕೋಪದಿಂದ ಮನಸ್ಸಿನಲ್ಲಿ ಬಂಗಾರದ ಬಗ್ಗೆ ದುರಾಸೆ ಇದ್ದರೂ ಬ್ರಾಹ್ಮಣತ್ವ ಹೋಗುತ್ತದೆ ಎಂಬ ಭಯದಿಂದ ನಾರಣಪ್ಪನ ಶವಸಂಸ್ಕಾರಕ್ಕೆ ಒಪ್ಪವುದಿಲ್ಲ. ಹೀಗೆ ಕಾದಂಬರಿಯ ಬೆಳವಣಿಗೆ ನಾರಣಪ್ಪನ ಸಂಬಂಧಿಯಾಗಿ ಲಕ್ಷ್ಮಣಾಚಾರ್ಯನ ಪಾತ್ರವನ್ನು ಕಾದಂಬರಿಕಾರರು ಸೃಷ್ಟಿಸಿ ಕಾದಂಬರಿಯ ಪ್ರಮುಖ ಪಾತ್ರವಾಗಿ ಕಂಡು ಬರುತ್ತದೆ.

**ಗರುಡಾಚಾರ್ಯ**

ಸಂಸ್ಕಾರ ಕಾದಂಬರಿಯಲ್ಲಿ ಗರುಡಾಚಾರ್ಯನ ಪಾತ್ರವು ಮುಖ್ಯವಾಗಿದ್ದು. ಈತನಿಗೆ ನಾರಣಪ್ಪ ಐದು ತಲೆಯ ಸಂಬಂಧ. ನಾರಣಪ್ಪನ ಮುತ್ತಜ್ಜನ ಅಜ್ಜಿಯು ಗರುಡಾಚಾರ್ಯನ ಮುತ್ತಜ್ಜಿಯು ಅಕ್ಕತಂಗಿಯರು. ಈತನಿಗೂ ನಾರಣಪ್ಪನಿಗೂ ಆಣೆ-ಭಾಷೆಯಾಗಿ ಎಲ್ಲ ಸಂಬಂಧವೂ ಕಳಚಿಕೊಂಡಿವೆ. ಪ್ರಾಣೇಶಾಚಾರ್ಯರು ನಾರಣಪ್ಪನ ಸಾವಿನ ಸುದ್ದಿಯನ್ನು ಮೊದಲು ಈತನಿಗೆ ಹೇಳುತ್ತಾನೆ, ಎಲ್ಲರು ಒಂದು ಕಡೆ ಸೇರಿ ನಾರಣಪ್ಪನ ಶವಸಂಸ್ಕಾರದ ವಿಚಾರವಾಗಿ ನಡೆಯುತ್ತಿದ್ದ ಚರ್ಚೆಯಲ್ಲಿ ಗರುಡಾಚಾರ್ಯನನ್ನು ಕುರಿತು ಪ್ರಾಣೇಶಾಚಾರ್ಯರು ಕೇಳಿದಾಗ, ನಮಗೂ ಆತನಿಗೂ ಕೋರ್ಟ್ ಕಛೇರಿ ವಿಷಯವಾಗಿ ಎಲ್ಲ ಸಂಬಂಧ ಕಳೆದುಕೊಂಡಿದ್ದ ನಾವು ಈಗ ಶವಸಂಸ್ಕಾರ ಮಾಡುವುದು ಅವಶ್ಯವೇ "ಧರ್ಮಶಾಸ್ತ್ರದ ಪ್ರಕಾರ ನಾವು ಮಾಡುವುದು ಸರಿ ನಮ್ಮೆಲ್ಲರ ಮಹಾ ವಿದ್ವಾಂಸರಾದ ನಿಮ್ಮ ವಾಕ್ಯ ನಮಗೆ ವೇದವಾಕ್ಯ ನಮಗೂ ಅವನಿಗೂ ತಲತಲಾಂತರ ಸಂಬಂಧ ನಿಜ ಆದರೆ ತಮಗೆ ತಿಳಿದಂತೆ ನಾನೂ ಅವನ ಅಪ್ಪನೂ ಕೋರ್ಟ್ ಹತ್ತಿ, ತೋಟದ ಕಾರಣಕ್ಕಾಗಿ ಜಗಳವಾಡಿ, ಅವನ ಅಪ್ಪ ಸತ್ತಮೇಲೆ ನಾನು ಧರ್ಮಸ್ಥಳದ ನ್ಯಾಯ ತಂದರೂ ಈ ನಾರಣಪ್ಪ ದೈವಾಜ್ಞೆಧಿಕ್ಕರಿಸಿದ ನಮಗೂ ಅವನಿಗೂ ಇನ್ನೂ ಮುಂದೆ ತಲೆತಲಾಂತರಕ್ಕೂ ಮಾತುಕತೆ, ಮದುವೆ, ಮುಂಜಿ, ಊಟ, ಉಪಚಾರಗಳು ಇತ್ಯಾದಿಗಳು ಇಲ್ಲವೆಂದು ಆಣೆ-ಭಾಷೆ ಮಾಡಿದರು. ನಾನು ಮಡುವುದು ಸರಿಯೆ ಎಂದನು ನೀವು ಹೇಳಿದ ಹಾಗೆ ಸಂಸ್ಕಾರ ಮಾಡೋಣವೆಂದರೆ ಅವ ಬ್ರಾಹ್ಮಣ ಹೌದೋ? ಅಲ್ಲವೊ ಎಂಬೋದು ನಿಜವಾದ ಪ್ರಶ್ನೆ. ಈತ

ಶೂದ್ರಳ ಸಹವಾಸ ಮಾಡಿದವ ಹೇಗೆ? ಮಾಡುವುದು ತನ್ನ ಮಗ ಪ್ರಾಣೇಣಾಚಾರ್ಯರಲ್ಲಿ ವೇದ ಕಲಿತರು ನಾರಣಪ್ಪನ ಮಾತಿನಿಂದಾಗಿ ಮಿಲಿಟರಿ ಸೇರಿಕೊಂಡ. ಇಂಥವನ ಸಂಸ್ಕಾರ ಮಾಡಬೇಕೆ? ಆಣೆ-ಭಾಷೆಯ ವಿಷಯವಿರಲಿ ಅದಕ್ಕೆ ಧರ್ಮಶಾಸ್ತ್ರದಲ್ಲಿ ನಿವಾರಣೆಯಿದೆ. ಶಾಂತಿ ಮಾಡಿಸಿಕೊಳ್ಳಬೇಕು, ಗೋದಾನವನ್ನು ಕೊಟ್ಟು ಪುಣ್ಯಕ್ಷೇತ್ರಗಳಿಗೆ ಹೋಗಿ ಬಂದರೆ ನಿವಾರಣೆ ಆಗುತ್ತದೆ. ಆದರೆ ಖರ್ಚಿನ ವಿಚಾರ ಈ ಖರ್ಚನ್ನು ನೀನು ಮಾಡು ಎಂಬುದಕ್ಕೆ ನನಗೆ ಅಧಿಕಾರವಿಲ್ಲವೆಂದು ಪ್ರಾಣೇಶಾಚಾರ್ಯರು ಹೇಳಿದಾಗ ಎಲ್ಲ ಬ್ರಾಹ್ಮಣರು 'ನಾರಣಪ್ಪ ಬ್ರಾಹ್ಮಣ್ಯವನ್ನು ಬಿಟ್ಟರು ಬ್ರಾಹ್ಮಣ್ಯ ಆತನನ್ನು ಬಿಡಲಿಲ್ಲ' ಅವನಿಗೆ ಬಹಿಷ್ಕಾರ ಹಾಕಲಿಲ್ಲ ಶಾಸ್ತ್ರ ರೀತಿಯಲ್ಲಿ ಬಹಿಷ್ಕಾರ ಹಾಕದೇ ಸತ್ತದ್ದರಿಂದ ಅವನು ಬ್ರಾಹ್ಮಣನಾಗಿಯೇ ಸತ್ತಿದ್ದಾನೆ ಎಂಬ ಚರ್ಚೆ ನಡೆದಾಗ ಚಂದ್ರಿ ತನಗೆ ನಾರಣಪ್ಪ ಕೊಟ್ಟಿದ ಬಂಗಾರವನ್ನು ಅವರ ಮುಂದೆ ಇಡುತ್ತಾಳೆ. ಗರುಡಾಚಾರ್ಯನಿಗೂ ಬಂಗಾರದ ಬಗ್ಗೆ ಆಸೆ ಇದ್ದರೂ ಬಾಹ್ಯವಾಗಿ ಅದನ್ನು ತೋರಿಸಿಕೊಳ್ಳದೆ ಬಂಗಾರದ ಆಸೆಯಿಂದ ಬ್ರಾಹ್ಮಣ್ಯ ನಾಶವಾದೀತು ಎಂಬ ದಿಗಿಲಾಯಿತು. ಈ ವಿಚಾರದಲ್ಲಿ ಗರುಡಾಚಾರ್ಯ ಮತ್ತು ಲಕ್ಷ್ಮಣಾಚಾರ್ಯರ ನಡುವೆ ಇದ್ದ ಪರಸ್ಪರ ದ್ವೇಷ ಅಸೂಯೆಗಳು ಇನ್ನಷ್ಟು ಉರಿದವು. ಗರುಡಾಚಾರ್ಯನು ನಾರಣಪ್ಪನ ಸಂಬಂಧಿಯಾಗಿ ಕಾದಂಬರಿಯ ಧರ್ಮದ ಸೂಕ್ಷ್ಮತೆಯನ್ನು ಹೊಂದಿರುವ ಪಾತ್ರವಾಗಿದೆ ಗರುಡಾಚಾರ್ಯನ ಏಕಮಾತ್ರ ಪುತ್ರ ಶ್ಯಾಮ ಮನೆಬಿಟ್ಟು ಮಿಲಿಟರಿಗೆ ಸೇರಿದ್ದಕ್ಕೆ ಅನೇಕ ಕಾರಣಗಳಿವೆ ತಂದೆಯ ಶಿಕ್ಷೆ ತಡೆಯಲಾರದೆ ಹೋದ ಎಂದರೆ ನಾರಣಪ್ಪನಿಗೆ ಆಗದವರು ಅವನಿಂದ ಹೋದನೆಂದು ಹೇಳುತ್ತಾರೆ ಸಂಸ್ಕಾರ ಮಾಡಿ ಬಂಗಾರ ನಮಗೆ ಸೇರಿದ್ದೇ ಆದರೆ ಮಿಲಿಟರಿಯಿಂದ ಮಗನನ್ನು ಬಿಡಿಸಿಕೊಳ್ಳಲು ಒಂದು ಮಾರ್ಗವಾಯಿತು ಎಂದು ಹಿಗ್ಗಿದಳು ನಾರಣಪ್ಪ ಸಂಸ್ಕಾರವನ್ನು ಗಂಡನೇ ಮಾಡುವಂತಾಗಲಿ ಎಂದು ದೇವರನ್ನ ಬೇಡಿದಳು ಇದಕ್ಕು ಮುಂಚೆ ಲಕ್ಷ್ಮಣಾಚಾರ್ಯ ಮಾಡಿದರೆ ಏನು ಗತಿ ಎಂದು ಚಡಪಡಿಸಿದಳು. ಈ ರೀತಿ ಕಾದಂಬರಿಯಲ್ಲಿ ಗರುಡಾಚಾರ್ಯನ ಪಾತ್ರವು ಪ್ರಮುಖ ಪತ್ರವಾಗಿ ಮೂಡಿ ಬಂದಿದೆ.

**ಮಾಲೇರ ಪುಟ್ಟ**

ಸಂಸ್ಕಾರ ಕಾದಂಬರಿಯಲ್ಲಿ ಪುಟ್ಟನ ಪಾತ್ರವು ಒಂದು ವಿಶಿಷ್ಟವಾದ ಸ್ಥಾನಪಡೆದಿದೆ. ಚಂದ್ರಿಯು ಪ್ರಾಣೇಶಾಚಾರ್ಯರ ಬದುಕಿನಲ್ಲಿ ಬದಲಾವಣೆ ತಂದ ಮೇಲೆ ಹೆಂಡತಿಯನ್ನು ಸಂಸ್ಕಾರ ಮಾಡಿ ಪ್ರಾಣೇಶಾಚಾರ್ಯನು ಚಂದ್ರಿಯನ್ನು ಕಾಣಬೇಕು, ಆಕೆಯ ಜೊತೆಯಲ್ಲಿ ಜೀವನ ನಡೆಸಬೇಕೆಂದು ತೀರ್ಮಾನಿಸಿ ಅಗ್ರಹಾರವನ್ನು ಬಿಟ್ಟು ಹೊರಟು ಹೋಗುವಾಗ ದಾರಿಯ ಮಧ್ಯದಲ್ಲಿ ಸಿಗುವಂತಹ ವ್ಯಕ್ತಿಯೇ ಈ ಮಾಲೇರಪುಟ್ಟ ಪ್ರಾಣೇಶಾಚಾರ್ಯರ ಬದುಕಿನ ಬದಲಾವಣೆಗೆ ಚಂದ್ರಿ ಕಾರಣಳಾದರೆ ಆ ಬದಲಾವಣೆಗಳನ್ನು ಕಾರ್ಯಗತ ಮಾಡುವ ಪಾತ್ರವೇ ಪುಟ್ಟನದು. ಈ ಪುಟ್ಟನ ಸಹವಾಸದಲ್ಲಿ ಪ್ರಾಣೇಶಾಚಾರ್ಯರಿಗೆ ನಿಜವಾದ ಸಮಾಜದ ಅರಿವಾಗುತ್ತದೆ. ನನ್ನ ಬೆನ್ನಿಗೆ ಅಂಟಿ ಬಂದ ತ್ರಿಶಂಕು ಎಂದು ಪ್ರಾಣೇಶಾಚಾರ್ಯರು ಅಂದುಕೊಂಡರು. ಅವರ ತ್ರಿಶಂಕು ಬದುಕಿಗೆ ಮತ್ತು ಅದರಿಂದ ಪಾರಾಗುವ ದಾರಿಯನ್ನು ಪುಟ್ಟು ತೋರಿಸುತ್ತಾನೆ. ಪುಟ್ಟು ತನ್ನನ್ನು 'ಒಗಟಿನ ಪುಟ್ಟನೆಂದು' ಪರಿಚಯಿಸಿಕೊಂಡರು.

ಪ್ರಾಣೇಶಾಚಾರ್ಯರ ಒಗಟಿನಂತ ಬದುಕಿಗೆ, ಉತ್ತರ ದೊರಕಿಸುವಲ್ಲಿ ಪ್ರಮುಖ ಪಾತ್ರವಹಿಸುತ್ತಾನೆ. ಅವನು ಅವರಿಗೆ ಕೊಟ್ಟ ಕಾಯಿಬೆಲ್ಲವು ಅವರ ಹಸಿವೆಯನ್ನು ತಣಿಸಿದಂತೆ, ಕಾಡುತ್ತಿದ್ದ ದ್ವಂದ್ವಗಳಿಗೆ ಪರಿಹಾರ ಒದಗಿಸಿದಂತಾಗುತ್ತವೆ. ಪ್ರಾಣೇಶಾಚಾರ್ಯರು ಈತನ್ನು ಪ್ರಾರಬ್ಧದಂತೆ ಬೆನ್ನು ಹತ್ತಿದವನು ಎಂದು ಎಣಿಸಿದರೂ, ಅವನಿಂದ ಬಿಡುಗಡೆ ಹೊಂದಲು ಮಾಡಿದ ಎಲ್ಲ ರೀತಿಯ ಪ್ರಯತ್ನಗಳು ವಿಫಲಹೊಂದಿ ಕೊನೆಗೆ ಅವನೇ ಪ್ರಾಣೇಶಾಚಾರ್ಯರಿಗೆ ಆತ್ಮೀಯನಾಗಿ ದಾರಿ ತೋರಿಸುತ್ತಾನೆ. ಅವನ ಸಹವಾಸದಿಂದ ಪ್ರಾಣೇಶಾಚಾರ್ಯರು ತಾವು ಹಿಂದೆಂದೂ ಮಾಡದೇ ಇರುವಂತಹ ಹಲವು ಕಾರ್ಯಗಳನ್ನು ಮಾಡುತ್ತಾರೆ. ಧರ್ಮಶಾಸ್ತ್ರಕ್ಕೆ ವಿರುದ್ಧವಾಗಿ ಅವನ ಜೊತೆಯಲ್ಲಿ ಸೇರಿ ಹೋಟಲಿನಲ್ಲಿ ಕಾಫಿ ಕುಡಿಯುತ್ತಾರೆ. ಕೋಳಿ ಜಗಳ ನೋಡುತ್ತಾರೆ, ಪದ್ಮಾವತಿಯ ಬಗ್ಗೆ ಆಕರ್ಷಿತರಾಗಿ ಅವಳ ಮನೆಗೆ ಹೋಗಿ ಅವಳ ಪರಿಚಯಮಾಡಿಕೊಂಡು ಬರುತ್ತಾರೆ. ಸೂತಕದಲ್ಲಿದ್ದರೂ ದೇವಸ್ಥಾನದಲ್ಲಿ ಊಟ ಮಾಡುತ್ತಾರೆ. ಇವೆಲ್ಲವು ಪ್ರಾಣೇಶಾಚಾರ್ಯರನ್ನು ಅಗ್ರಹಾರವೆಂಬ ಬ್ರಾಹ್ಮಣತ್ವದ ಬಂಧನದಿಂದ ಬಿಡಿಸಿಕೊಳ್ಳುವಂತಹ ಸಹಾಯ ಮಾಡುತ್ತವೆ. ಅವರ ಬದುಕೆಲ್ಲವು ಧರ್ಮದ ಪರವಾಗಿಯೇ ಇತ್ತು ಅಗ್ರಹಾರದ ಬ್ರಾಹ್ಮಣರ ಸಮಾಜಕ್ಕೆ ಇವರೇ ಜವಾಬ್ದಾರಿ ಹೊತ್ತಿದ್ದರು ಆದರೆ ಕಾಡಿನ ಕತ್ತಲಲ್ಲಿ ಪುಟ್ಟನ ಸಹವಾಸದಲ್ಲಿ ಅವರು ತಮ್ಮ ಜೀವನದ ಹೊಣೆ ಏನೆಂಬುದನ್ನು ಅರಿತರು. ಹೀಗೆ ಅವರ ಆ ಬದುಕಿನಿಂದ ಬಿಡುಗಡೆ ದೊರಕಿಸಿಕೊಟ್ಟವ ಮಾಲೇರ ಪುಟ್ಟ ಸಂಸ್ಕಾರ ಕಾದಂಬರಿಯಲ್ಲಿ ಪರಿವರ್ತನೆಗೊಂಡ ಪ್ರಾಣೇಶಾಚಾರ್ಯನಾಗಿ ಬರುವಂತೆ ಮಾಡುವಲ್ಲಿ ಪುಟ್ಟನ ಪಾತ್ರವು ಬಹಳ ಮುಖ್ಯವಾದ ಪಾತ್ರವಾಗಿದೆ.

**ಮಂಜಯ್ಯ**

ಕಾದಂಬರಿಯಲ್ಲಿ ಬರುವಂತ ಪಾತ್ರಗಳಲ್ಲಿ ಮಂಜಯ್ಯನ ಪಾತ್ರವು ಒಂದು. ನಾರಣಪ್ಪನ ಸಾವಿನ ಸುದ್ದಿ ತಿಳಿದು ಇಡೀ ಅಗ್ರಹಾರದಲ್ಲಿ ಶವಸಂಸ್ಕಾರ ವಿಚಾರವಾಗಿ ಉಂಟಾದ ಸಂದಿಗ್ಧತೆಗಳಿಂದಾಗಿ ಅವನ ಸಂಸ್ಕಾರ ಯಾರು? ಮಾಡಬೇಕೆಂಬ ಜಿಜ್ಞಾಸೆಯಿಂದ ಅಗ್ರಹಾರದ ಯಾವ ಬ್ರಾಹ್ಮಣನು ಒಪ್ಪದಿದ್ದಾಗ ಅಗ್ರಹಾರದಲ್ಲಿ ಹೆಣ ಇಟ್ಟುಕೊಂಡು ಕೈಕಟ್ಟಿಕೂರಲು ಸಾಧ್ಯವೇ? ಸನಾತನ ಧರ್ಮದ ಪ್ರಕಾರ ಅಗ್ರಹಾರದಿಂದ ಹೆಣ ತೆಗೆಯದೆ ದೇವರ ಪೂಜೆ ಸಂಧ್ಯಾವಂದನೆ, ಊಟ, ಉಪಚಾರ ಏನೂ ನಡೆಯೋವಂತಿಲ್ಲ. ಹೀಗೆ ಬ್ರಾಹ್ಮಣರೆಲ್ಲರು ಒಟ್ಟಾಗಿ ವಾದಿಸಿ ಇಡೀ ದಿನ ಊಟವಿಲ್ಲದೆ ಸಂಕಟವನ್ನು ಕಲ್ಪಿಸಿಕೊಂಡ ದಾಸಾಚಾರ್ಯನಿಗೆ ಒಂದು ಸೂಚನೆ ಹೊಳೆಯಿತು. ಪಾರಿಜಾತಪುರದ ಬ್ರಾಹ್ಮಣರಿಗೂ ನಾರಣಪ್ಪನಿಗೂ ಅವರ ಆಚಾರ ನಮ್ಮವರ ಹಾಗೆ ಬಿಗಿಯಲ್ಲ ಎಂಬ ಸಲಹೆಯ ಮೇರೆಗೆ ಪಾರಿಜಾರಪುರದ ಬ್ರಾಹ್ಮಣರು ಅಡ್ಡ ಪಂಕ್ತಿಯವರು, ಸ್ಮಾರ್ತರು ಅವರಲ್ಲಿ ಪ್ರಮುಖ ವ್ಯಕ್ತಿ ಮಂಜಯ್ಯ, ನಾರಣಪ್ಪನಿಗೂ ಆತನಿಗೂ ತುಂಬಾ ಸ್ನೇಹವಿತ್ತು. ಪಾರಿಜಾತಪುರದ ಬ್ರಾಹ್ಮಣರಾದ ಮಂಜಯ್ಯನ ಮನೆಗೆ ಬಂದು ನಾರಣಪ್ಪನ ಸಾವಿನ ಸುದ್ದಿಯನ್ನು ತಿಳಿಸಿದರು. ಸಾವಿಗೆ ಕಾರಣವನ್ನು ಕೇಳಿ ತಿಳಿದ ಮಂಜಯ್ಯ ಆ ಊರಿನ ಅಡ್ಡ ಪಂಕ್ತಿ ಬ್ರಾಹ್ಮಣರಿಗೆ ನಾರಣಪ್ಪನ ಸಾವಿನ ವಿಚಾರ ತಿಳಿಸಿದನು. ಈ ಸುದ್ಧಿ ತಿಳಿದ ಅವರಿಗೆ ಮಿತ್ರವಿಯೋಗದಿಂದ ವ್ಯಥೆಯಾಯಿತು. ಮೇಲು ಜಾತಿಯ ಬ್ರಾಹ್ಮಣನೊಬ್ಬನ

ಶವಸಂಸ್ಕಾರದ ಸಂದರ್ಭ ದೊರೆಯಿತ್ತೇಂದು ಸಂತೋಷವೂ ಆಯಿತು. ನಾರಣಪ್ಪ ತಮ್ಮಗಳ ಮನೆಯಲ್ಲಿ ಊಟ ಮಾಡುತ್ತಿದ್ದ ಎನ್ನುವುದು ಅವನ ಮೇಲಿನ ಪ್ರೀತಿಗೆ ಅರ್ಥ ಕಾರಣ ಹೀಗೆ ಮಂಜಯ್ಯ ನಾರಣಪ್ಪನ ಗೆಳೆಯನಾಗಿದ್ದು ಅವನ ಮೂಲಕ ಸಂಸ್ಕಾರ ಮಾಡಿಸುವ ಸಲುವಾಗಿ ಸಹಾಯ ಕೇಳಲು ಹೋಗುವುದು ಅದರ ನಾಯಕತ್ವ ವಹಿಸಿದ್ದು ಮಂಜಯ್ಯ ತೀರ್ಮಾನಗಳನ್ನು ತೆಗೆದುಕೊಳ್ಳುವುದು ಮಹತ್ವ ಸನ್ನಿವೇಶವಾಗಿ ಕಾದಂಬರಿಯಲ್ಲಿ ಬಂದಿದೆ. ಈ ಮೂಲಕ ಮಂಜಯ್ಯನ ಪಾತ್ರವು ಕಾದಂಬರಿಯ ಬೆಳವಣಿಗೆಯಲ್ಲಿ ಪ್ರಮುಖವಾದುದು.

**ಮಹಾಬಲ**

ಸಂಸ್ಕಾರ ಕಾದಂಬರಿಯ ಮತ್ತೊಂದು ಪ್ರಗತಿಪರವಾದ ಮನೋಧೋರಣೆಯನ್ನು ಹೊಂದಿರುವ ಪಾತ್ರವೆಂದರೆ ಮಹಾಬಲ. ಈತ ಪ್ರಾಣೇಶಾಚಾರ್ಯನ ಪರಮಾತ್ಮಮಿತ್ರ ಇಬ್ಬರೂ ಕೂಡಿ ಕಾಶಿಗೆ ಹೋಗಿ ವಿದ್ಯೆ ಕಲಿತರು, ಮಹಾಬಲ ಅಸಾಧ್ಯ ಜಾಣ ಅವನ ಮನಸ್ಸಿಗೆ ಮೀರಿದ ವಿಷಯವೇ ಇರಲಿಲ್ಲ. ಗುರುಗಳು ಪಾಠ ಹೇಳುವಾಗಲೇ ಮುಂದಿನದನ್ನು ಊಹಿಸುಬಿಡುವಂತ ಶಕ್ತಿ ಆತನಿಗಿತ್ತು. ಅವನೊಬ್ಬನ ಮೇಲೆ ಮಾತ್ರ ಪ್ರಾಣೇಶಾಚಾರ್ಯರಿಗೆ ಅಸಾಧ್ಯವಾದ ಅಸೂಯೆ ಮತ್ತು ಪ್ರೇಮ ಹುಟ್ಟಿತು. ತಾನು ಮಾಧ್ವ ಅವನು ಸ್ಮಾರ್ಥ ಆದರೆ ಇವರಿಬ್ಬರಲ್ಲಿ ಗಾಢವಾದ ಪ್ರೇಮಕ್ಕೆ ಅಡ್ಡಿ ಇರಲಿಲ್ಲ. ಕಾಶಿಯಲ್ಲಿದ್ದ ಮಹಾಬಲ ಪ್ರಾಣೇಶಾಚಾರ್ಯರಿಂದ ದೂರವಾದ, ಯಾಕೆಂದು ಹೊಳೆಯಲಿಲ್ಲ. ಕಾರಣ ಹುಡುಕುತ್ತಾ ಎಲ್ಲ ಕಡೆ ಹುಡುಕಿದ ಒಂದು ದಿನ ಮನೆಯೊಂದರ ಜಗುಲಿಯ ಮೇಲೆ ಕುಳಿತಿದ್ದು ಆಶ್ಚರ್ಯದಿಂದ ನೋಡಿ ಕೈಹಿಡಿದು ಬಾ ಎಂದು ಪ್ರಾಣೇಶಚಾರ್ಯ ಕರೆದರು ಬರಲಿಲ್ಲ. ಆತ ಪ್ರಾಣೇಶಚಾರ್ಯ ನಿನ್ನ ಪಾಡಿಗೆ ನೀನು ಹೋಗು? ಎಂದುಬಿಟ್ಟ ರೇಗಿ ಎದ್ದು ನಿಂತು ನಿನಗೆ ಸತ್ಯಬೇಕೆ ಕೇಳು ನಾನು ವ್ಯಾಸಂಗವನ್ನೂ ಬಿಟ್ಟುಬಿಟ್ಟೆ. ಈಗ ಯಾವುದಕ್ಕಾಗಿ ಬದುಕುವೆ ಗೊತ್ತೆ? ಒಳಗೆ ಬಾ ಎಂದು ಕರೆದುಕೊಂಡು ಹೋಗಿ ಒಂದು ಹುಡುಗಿಯನ್ನು ತೋರಿಸಿದ. ಅವಳ ವೇಷ ನೋಡಿ ಅವಳು ವೇಶ್ಯೆಯೆಂದು ತಿಳಿಯಿತು. ಮಹಾಬಲ ತಿಳಿಯಿತಲ್ಲವೆ ಪ್ರಾಣೇಶ ನನಗಾಗಿ ಇನ್ನೂ ಯೋಚಿಸಬೇಡ. ಮನಸ್ಸು ಕಲ್ಲಾಗಿತ್ತು. ಭ್ರಷ್ಟನಾಗಿ ಹೋದ ಮಹಾಬಲನಿಗೆ ವಿರುದ್ಧವಾಗಿ ಬದುಕಬೇಕೆಂಬ ಹಠತೊಟ್ಟಿ ಬಂದುಬಿಟ್ಟ. ಆದರೆ ಇಲ್ಲಿ ನಾರಣಪ್ಪನನ್ನು ಕಂಡಾಗಲೆಲ್ಲ ಮಹಾಬಲನೇ ನೆನಪಿಗೆ ಬರುತ್ತಾನೆ ಎಂದು ಚಂದ್ರಿಯ ಸಹವಾಸ ಮಾಡಿದ ಮೇಲೆ ರಾತ್ರಿ ನಡೆದು ಕಾಡಿನಲ್ಲಿ ಹೋಗುವಾಗ ಪ್ರಾಣೇಶಾಚಾರ್ಯನ ನೆನಪಿಗೆ ಮಹಾಬಲ ಬರುತ್ತಾನೆ. ಮಹಾಬಲನನ್ನು ನೋಡಬೇಕು, ಕೇಳಬೇಕು ಎಂದು ಈಗ ಅನಿಸುತ್ತಿದೆ. ಯಾಕೆ ನೀನು? ಸ್ವೇಚೇಯಿಂದಲೇ ನಿನ್ನ ಜೀವನದ ಗತಿಯನ್ನು ಬದಲಿಸಿದೆ ಎಂದು ಯಾವ ಅನುಭವ, ಯಾವ ಆಕಾಂಕ್ಷೆ, ಯಾವ ಮೋಹ ನಿನ್ನನ್ನು ಹೀಗೆ ನಡೆಸಿತೆಂದು ಕೇಳಬೇಕು ಎಂಬಂತಹ ರೀತಿಯಲ್ಲಿ ಪ್ರಾಣೇಶಾಚಾರ್ಯರು ಮನಸ್ಸಿನಲ್ಲಿ ಅಂದಿಕೊಳ್ಳುತ್ತಾನೆ. ಹೀಗೆ ಮಹಾಬಲನ ಪಾತ್ರದ ಮೂಲಕ ಪ್ರಾಣೇಶಾಚಾರ್ಯನಲ್ಲಿದ್ದ ಅತೃಪ್ತ ಭಾವನೆಯನ್ನು ಕಾದಂಬರಿಕಾರರು ತಿಳಿಸುವ ಪ್ರಯತ್ನ ಮಾಡಿದ್ದಾರೆ.

**ಪದ್ಮಾವತಿ**

ಸಂಸ್ಕಾರ ಕಾದಂಬರಿಯಲ್ಲಿ ಬರುವ ಮತ್ತೊಂದು ಚಿಕ್ಕಪಾತ್ರ ಪದ್ಮಾವತಿ ಪ್ರಾಣೇಶಾಚಾರ್ಯರು ಚಂದ್ರಿಯ ಸಮಾಗಮದಿಂದ ಮನಸ್ಥಿತಿ ಬದಲಾದ ಮೇಲೆ ತನ್ನ ಹೆಂಡತಿಯ ಶವಸಂಸ್ಕಾರ ನೆರವೇರಿಸಿದ ಮೇಲೆ ಚಂದ್ರಿಯ ಜೊತೆಯಲ್ಲಿ ಬಾಳಬೇಕೆಂದು ಅಗ್ರಹಾರವನ್ನು ಬಿಟ್ಟುಹೋಗುವುದು. ಹೀಗೆ ಹೋಗುವಾಗ ಮಾಲೇರ ಪುಟ್ಟ ಇವರ ಜೊತೆಗೆ ಆಕಸ್ಮಿಕವಾಗಿ ಕೂಡಿಕೊಂಡು ದಾರಿಯಲ್ಲಿ ಪರಸ್ಪರ ಮತನಾಡುತ್ತ ಹೋಗಿ ಸಾಂಪ್ರದಾಯಿಕವಾಗಿ ಬಂದಿದ್ದಂತಹ ಎಲ್ಲಾ ನಂಬಿಕೆ ಆಚರಣೆಗಳನ್ನು ಇದೇ ಮೊದಲ ಬಾರಿಗೆ ಮೀರಿ ಹೋಟಲಿನಲ್ಲಿ ಕಾಫಿ ಕುಡಿಯುವುದು, ಕೋಳಿ ಕಾಳಗ ನೋಡುವುದು, ಸೂತಕವಿದ್ದರೂ ಬ್ರಾಹ್ಮಣರ ಜೊತೆ ದೇವಸ್ಥಾನದಲ್ಲಿ ಊಟ ಮಾಡುವುದು. ನಂತರ ಪುಟ್ಟ ನಮ್ಮ ಪೈಕಿಯೊಬ್ಬಳ ಮನೆಯಿದೆ ಇಲ್ಲಿ ಒಬ್ಬಳೆ ಇದ್ದಾಳೆ ಧೈರ್ಯವಂತೆ ಒಳ್ಳೆಯ ರೂಪವಂತೆ. ನನಗೆ ದೂರದ ಸಂಬಂಧಿ ಎಂದು ಪದ್ಮಾವತಿಯ ಮನೆಗೆ ಕರೆದುಕೊಂಡು ಹೋಗುತ್ತಾನೆ. ಇಲ್ಲಿಗೆ ಏಕೆ ಕರೆದುಕೊಂಡು ಬಂದಿದ್ದಾನೆಂಬುದು ಪ್ರಾಣೇಶಾಚಾರ್ಯರಿಗೆ ಅರಿವಾಯಿತು. ಅವಳನ್ನು ಕಂಡು ಮನಸ್ಸು ಆಕರ್ಷಿತವಾದರು ಅಲ್ಲಿಯೇ ಉಳಿದುಕೊಳ್ಳಲು ಮನಸ್ಸು ಬಾರದೆ ಅಲ್ಲಿಂದ ಪ್ರಾಣೇಶಾಚಾರ್ಯರು ಹೊರಟರು. ಪದ್ಮಾವತಿಯ ಪಾತ್ರ ಚಿಕ್ಕದಾದರೂ ಪ್ರಾಣೇಶಾಚಾರ್ಯರ ಬದುಕಿನ ದಿಕ್ಕನ್ನು ಬದಲಾಯಿಸಿದ ಪಾತ್ರಗಳ್ಲಲಿ ಒಂದಾಗಿ ಬಂದಿದೆ.

**ಬೆಳ್ಳಿ**

ಕಾದಂಬರಿಯಲ್ಲಿ ಬರುವ ಒಂದು ಚಿಕ್ಕಪಾತ್ರ ಬೆಳ್ಳಿ. ಈಕೆ ಕೆಳ ಜಾತಿಯ ಹೆಣ್ಣು ಶ್ರೀಪತಿಯ ಜೊತೆ ಸಂಬಂಧವನ್ನು ಹೊಂದಿರುವ ಹೆಣ್ಣಾಗಿದ್ದಾಳೆ. ನಾರಣಪ್ಪನ ಸಾವಿನ ಸುದ್ದಿಯನ್ನು ಶ್ರೀಪತಿಗೆ ತಿಳಿದಿಲ್ಲ ಆಕೆಯ ಜೊತೆ ಕಾಮಸುಖ ಅನುಭವಿಸಿ ನಾರಣಪ್ಪನನ್ನು ಹುಡುಕಿಕೊಂಡು ಹೋಗುತ್ತಾಳೆ. ಈಕೆಯ ಬಗ್ಗೆ ನಾರಣಪ್ಪ ಅವಳ ಮೈಮಾಟವನ್ನು ಕುರಿತು ಬಣ್ಣಿಸುತ್ತಿದ್ದ. ಬ್ರಾಹ್ಮಣ ಹೆಣ್ಣುಗಳಿಗೂ ಹೋಲತಿಯ ಹೆಣ್ಣು ಮಗಳ ಬಗ್ಗೆ ವರ್ಣಿಸುವ ಸಂದರ್ಭದಲ್ಲಿ ಇಡೀ ಬ್ರಾಹ್ಮಣರಲ್ಲಿ ಆಕೆಯನ್ನು ನೋಡುತ್ತಿದ್ದ ಬಯಕೆ, ಅದನ್ನು ವ್ಯಕ್ತ ಪಡಿಸದೇ ಮನಸ್ಸಿನಲ್ಲಿ ಮರುಗುವ ಭಾವನೆಯನ್ನು ಬೆಳ್ಳಿಯ ಪಾತ್ರದ ಮೂಲಕ ತಂದಿದ್ದಾರೆ.

ಹೀಗೆ ಸಂಸ್ಕಾರ ಕಾದಂಬರಿಯ ಪ್ರಾಣೇಶಾಚಾರ್ಯ, ಚಂದ್ರಿ, ನಾರಣಪ್ಪ, ಲಕ್ಷ್ಮಣಾಚಾರ್ಯ, ಗರುಡಾಚಾರ್ಯ, ಮಹಾಬಲ, ಬೆಳ್ಳಿ, ಪದ್ಮಾವತಿ, ಮಾಲೇರ ಪುಟ್ಟ ಇವರ ಪಾತ್ರಗಳು ಕಾದಂಬರಿಯ ಬೆಳವಣಿಗೆಗೆ ಕಾರಣವಾಗಿದೆ. ಈ ಪಾತ್ರಗಳ ಮೂಲಕ ಕಾದಂಬರಿಕಾರರು ಪ್ರಗತಿಪರ ಚಿಂತನೆ, ಸಾಂಪ್ರದಾಯಿಕ ನಂಬಿಕೆಗಳಲ್ಲಿನ ಸತ್ವಹೀನವಾದವುಗಳನ್ನು ಕಳಚಿ ಧೈರ್ಯದಿಂದ ಪ್ರಾಮಾಣೀಕವಾಗಿ ಹೊಸ ಮೌಲ್ಯಗಳನ್ನೂ ಬಿತ್ತುವ ಪಾತ್ರಗಳಾಗಿರುವುದನ್ನು ಕಾಣಬಹುದಾಗಿದೆ.

## ವಂಶವೃಕ್ಷ ಕಾದಂಬರಿಯಲ್ಲಿನ ಪ್ರಮುಖ ಪಾತ್ರಗಳು

### ಶ್ರೀನಿವಾಸಶ್ರೋತ್ರಿ

ವಂಶವೃಕ್ಷ ಕಾದಂಬರಿಯಲ್ಲಿ ಬರುವ ಪ್ರಮುಖ ಪಾತ್ರ ಶ್ರೀನಿವಾಸಶ್ರೋತ್ರಿ. ನಂಜನಗೂಡಿನ ನಂಜುಂಡಶ್ರೋತ್ರಿಗಳ ಮಗ ಶ್ರೀನಿವಾಸಶ್ರೋತ್ರಿ. ಕಾದಂಬರಿಯ ಪ್ರಾರಂಭದಲ್ಲಿ ಈತ ತನ್ನ ಮಗನನ್ನ ಕಳೆದುಕೊಂಡ ಚಿತ್ರಣ ಮೂಡಿ ಬಂದಿದೆ. ಸುಮಾರು ಮೂವತ್ತು ವರ್ಷಗಳಿಂದಲೂ ಮಹಡಿಯ ಮೇಲಿನ ತಮ್ಮ ಕೋಣೆಯಲ್ಲಿ ಕುಳಿತು ದಿನವೂ ಅಧ್ಯಯನ ನಿರತರಾಗಿದ್ದಾರೆ. ಕೋಣೆಯ ತುಂಬಾ ಓಲೆಗರಿಗಳು, ಅಚ್ಚಾದ ಗ್ರಂಥಗಳು, ಶ್ರೋತ್ರಿಯರೆ ಸ್ವತಃ ಕೈಬರಹದಲ್ಲಿ ಪ್ರತಿಮಾಡಿ ಕೆಲವು ಪುಸ್ತಕಗಳನ್ನು ಜೋಡಿಸಿದ್ದಾರೆ. ಪೂರ್ವಿಕರು ಕಟ್ಟಿಸಿದ ಮನೆಯನ್ನು ಬಿಟ್ಟುಬರಲು ಅವರಿಗೆ ಇಷ್ಟವಿಲ್ಲ. ಅವರಿಗೆ ಪೂರ್ವಿಕರ ಬಗೆಗಿನ ನಿಷ್ಠೆ ಅಷ್ಟೆ ಗಟ್ಟಿಯಾಗಿತ್ತು. ಇವರಿಗೆ ಹಾಸನದ ಕನ್ಯೆ ಸತೂಲ ಪ್ರಸೂತಳೂ, ಸುರದ್ರೂಪಿಯಾ ಆದ ಭಾಗೀರಥಿಯನ್ನು ತಂದು ಮದುವೆ ಮಾಡಿದರು. ಶ್ರೀನಿವಾಸ ಶ್ರೋತ್ರಿಯವರ ಸಾಂಸಾರಿಕ ಜೀವನ ಆರಂಭವಾಯಿತು. ವಿವಾಹವಾಗಿ ಮೂರು ವರ್ಷಕಳೆದರು ಮಕ್ಕಳಾಗದೆ, ನಂತರ ನೂರಾರು ದೇವರಿಗೆ ಹರಕೆ ಹೊತ್ತರು. ಮೂರು ವರ್ಷದ ನಂತರ ನಂಜನಗೂಡಿನ ನಂಜುಂಡೇಶ್ವರ ಅನುಗ್ರಹದಿಂದ ಗಂಡು ಮಗು ಮೈಸೂರಿನ ದೊಡ್ಡ ಆಸ್ಪತ್ರೆಯಲ್ಲಿ ಜನಿಸಿತು. ಒಂದು ತಿಂಗಳು ಅಸ್ಪತ್ರೆಯಲ್ಲಿದ್ದ. ಅಲ್ಲಿಂದ ಹೊರಟಾಗ ಹೆರಿಗೆ ಮಾಡಿದ ಡಾಕ್ಟರ್ ಮುಂದೆ ಈಕೆ ಗರ್ಭಿಣಿಯಾದರೆ ಸಾವು ಸಂಭವಿಸಬಹುದೆಂದು ತಿಳಿಸಿದರು. ನೀವು ಆಕೆಯ ಜೊತೆಗಿನ ದೈಹಿಕ ಸಂಬಂಧ ನಿಲ್ಲಿಸಬೇಕೆಂದು ಡಾಕ್ಟರ್ ತಿಳಿಸಿದರು. ಶ್ರೀನಿವಾಸ ಶ್ರೋತ್ರಿಯವರಿಗೆ ಇಪ್ಪತ್ತಾರು ವರ್ಷಗಳ ತುಂಬಾ ಪ್ರಾಯ, ದೃಢಕಾಯ ಶಕ್ತಿವಂತ ಆಳು. ಅವರ ಮನಸ್ಸು ಹೆಂಡತಿಯ ಕಡೆ ಸುಳಿದರು ಡಾಕ್ಟರ್ ಕಿವಿಯಲ್ಲಿ ಗುಂಯ್‌ಗುಡುತ್ತಿತ್ತು. ಗಂಡನ ಮನಸ್ಸನ್ನು ಅರ್ಥಮಾಡಿಕೊಂಡ ಭಾಗೀರಥಮ್ಮ ಅಸಹಾಯಕಳಾದಳು. ತಾನು ಕೊಡದ ದೇಹ ಸುಖಕ್ಕೆ ಬದಲಾಗಿ ಅವಳು ಮೊದಲಿಗಿಂತಲು ಹೆಚ್ಚು ಶ್ರದ್ಧೆಭಕ್ತಿಯಿಂದ ಪತಿಸೇವೆ ಮಾಡುತ್ತಿದ್ದಳು.

ಶ್ರೀನಿವಾಸಶ್ರೋತ್ರಿಯವರು ಹಾಲು, ಮೊಸರು, ತುಪ್ಪ ತಿನ್ನುವುದನ್ನು ಬಿಟ್ಟರು. ದಿನವು ಬೆಳಿಗ್ಗೆ ಎದ್ದಮೇಲೆ ಮನೆಯ ಹಿಂದಣ ಹಿತ್ತಲನ್ನು ಅಗೆದು ಕೈತೋಟ ಮಾಡುವಂತಹ ದೈಹಿಕ ಶ್ರಮದ ಕೆಲಸದಲ್ಲಿ ತೊಡಗಿಸಿಕೊಂಡರು. ಒಂದು ದಿನ ಹೀಗೆ ಹಾಲು, ಮೊಸರು, ತುಪ್ಪ ತಿನ್ನುವುದನ್ನು ಬಿಟ್ಟು ದಿನವೆಲ್ಲ ಶ್ರಮದ ಕೆಲಸ ಮಾಡುತ್ತಿದ್ದರೆ ಗತಿಯೇನು? ಎಂದು ಬಲವಂತದಿಂದ ತುಪ್ಪ ಬಡಿಸಲು ಬಂದಾಗ "ಮನುಷ್ಯನ ಮನಸ್ಸು ಸ್ಥಿಮಿತದಲ್ಲಿರಬೇಕಾದರೆ ಇದೆಲ್ಲ ಅಗತ್ಯವೆಂದು" ಹೇಳಿದರು ದೈಹಿಕವಾಗಿ ಕೃಶರಾದ ಪತಿಯನ್ನು ನೋಡಿ ತಂದೆ-ತಾಯಿಯರಿಗೆ ಪತ್ರ ಬರೆದು ವಿಷಯ ತಿಳಿಸಿದಳು. ತನ್ನ ತಂಗಿಯನ್ನ ಮದುವೆಯಾಗುವಂತೆ ತಂದೆ ಹೇಳಿದಳು. ಹೆಂಡತಿ ಬದುಕಿರುವಾಗ ಇದೆಲ್ಲ ಸಾಧ್ಯವಿಲ್ಲವೆಂದು ಶೋತ್ರಿಯವರು ನಿರಾಕರಿಸಿದರು. ತನ್ನ ಮನೆಯ ಆಳು ಲಕ್ಷ್ಮಿಯನ್ನ ಗಂಡನ ಜೊತೆ

ಚನ್ನಾಗಿರುವಂತೆ ಒಪ್ಪಿಸಿದರೂ ಶೋತ್ರಿಯವರು ಒಪ್ಪಲಿಲ್ಲ. ಮಗ ಬೆಳೆದು ದೊಡ್ಡವನಾದ ಮೇಲೆ ಆತನಿಗೆ ಕಾತ್ಯಾಯಿನಿಯ ತಂದು ಮದುವೆ ಮಾಡಿದರು. ಮದುವೆಯಾದ ಎರಡು ವರ್ಷದಲ್ಲಿಯೇ ಗಂಡು ಮಗು ಜನಿಸಿತು. ನಂತರ ಮಗುವಿಗೆ ಆರು ತಿಂಗಳದ್ದಾಗ ಆ ವರ್ಷ ಜೇಷ್ಠ ಮಾಸದಲ್ಲಿ ಕಪಿಲಾ ನದಿಯ ಪ್ರವಾಹದಲ್ಲಿ ಸುಳಿಗೆ ಸಿಕ್ಕ ಮಗ ಸತ್ತುಹೋದನು.

ಹೀಗೆ ಮಗನನ್ನ ಕಳೆದುಕೊಂಡ ಶ್ರೋತ್ರಿಯವರು ಮೊಮ್ಮಗನ ಬೆಳವಣಿಗೆಯಲ್ಲಿಯೇ ಆತನ ದುಃಖವನ್ನ ಕಡಿಮೆ ಮಾಡಿಕೊಂಡು ಅಧ್ಯನಯದಲ್ಲಿ ತೊಡಗಿದರು. ಕಾತ್ಯಾಯಿನಿಯನ್ನು ಮಗಳಂತೆ ನೋಡಿಕೋಂಡರು. ಅವಳಿಗೆ ಭಗವದ್ಗೀತೆಗಳನ್ನು ಓದುವಂತೆ ಸಲಹೆ ನೀಡಿದರು. ಒಂದು ದಿನ ಸೊಸೆ ಗಂಡ ಅರ್ಧಕ್ಕೆ ನಿಲ್ಲಿಸಿದ್ದ ಪದವಿಯನ್ನು ತಾನು ಓದಿ ಮುಗಿಸುತ್ತೇನೆಂದು ಓದುವ ವಿಚಾರವಾಗಿ ಕಾಲೇಜಿಗೆ ಸೇರುವ ಇಂಗಿತ ವ್ಯಕ್ತಪಡಿಸಿದಳು. ಮೊದಲು ವಿರೋಧಿಸಿದರು ನಂತರ ಅನುಮತಿ ನೀಡಿದರು. ಸೊಸೆ ಕಾಲೇಜಿಗೆ ಸೇರಿದ ಮೇಲೆ ರಾಜರಾಯನ್ನು ಪ್ರೀತಿ ಅವರ ಜೊತೆ ಮದುವೆಯ ವಿಚಾರವನ್ನ ಪತ್ರದ ಮೂಲಕ ತಿಳಿಸಿದಾಗ ಮೌನವಾಗಿಯೇ ಇದ್ದ ನಂತರ ಸೊಸೆಗೆ ತಿಳುವಳಿಕೆ ನೀಡಿದರು. ಆದರೆ ಸೊಸೆ ರಾಜರಾಯರನ್ನ ಮದುವೆಯಾದ ಮೇಲೆ ತನ್ನ ಮೊಮ್ಮಗನ ಬಗ್ಗೆ ಹೆಚ್ಚು ಕಾಳಜಿ ವಹಿಸಿದರು. ಸೊಸೆ ಮಗಬೇಕು ಎಂದಾಗ ವಂಶವನ್ನ ಬೆಳೆಸುವ ಮಗಬೇಕೆಂದು ಆತನನ್ನ ಆಕೆಯ ಜೊತೆ ಕಳುಹಿಸಲು ನಿರಾಕರಿಸಿದರು. ನಂತರ ತಾನು ಯಾರು ಎಂಬ ಸತ್ಯ ಗೊತ್ತಾದ ಮೇಲೆ ತಾವು ಜೀವನದಿಂದ ಮುಕ್ತಿ ಪಡೆಯಬೇಕೆಂಬ ಇಂಗಿತದೊಂದಿಗೆ ಸನ್ಯಾಸತ್ವ ಸ್ವೀಕರಿಸಲು ನಿರ್ಧಾರಿಸಿ ಮೊಮ್ಮಗನಿಗೆ ಮದುವೆ ಮಾಡಿ ಅಲ್ಲಿಂದ ಹೊರಟರು. ಹೋಗುವಾಗ ಕೊನೆ ಸೊಸೆ ಕಾತ್ಯಯಿನಿಯನ್ನ ನೋಡಬೇಕೆಂಬ ಬಯಕೆಯಿಂದ ಮೈಸೂರಿಗೆ ಬಂದರು. ಆಕೆಯನ್ನ ಕಂಡು ಮರುಗಿದರು. ಕೊನೆಗೆ ಸೊಸೆಯ ಆಸೆಯಂತೆ ಮೊಮ್ಮಗನನ್ನ ಕರೆಸಿ ತಾಯಿಯ ಸಂಸ್ಕಾರ ಮಾಡು ಎಂದು ಹೇಳಿ ಹೊರಟು ಹೋದರು.

ವಂಶವೃಕ್ಷ ಕಾದಂಬರಿಯಲ್ಲಿ ಬರುವ ಪ್ರಮುಖ ಪಾತ್ರವಾಗಿ ಆಧುನಿಕತೆಯನ್ನ, ಉದಾರತೆಯನ್ನು, ಧರ್ಮದ 'ನಿಷ್ಠೆಯನ್ನು ಹೊಂದಿದ್ದು. ಸೊಸೆಯ ಎಲ್ಲರೀತಿಯ ಪ್ರಶ್ನೆಗಳಿಗೆ ಮೌನದಿಂದಲೇ ಉತ್ತರ ಕೊಟ್ಟು ವಂಶವನ್ನ ಬೆಳೆಸುವ ಆಸೆಯಿಂದ ಮೊಮ್ಮಗನಿಗೆ ಎಲ್ಲವನ್ನು ವಹಿಸಿ ಹೊರಟುಹೋದರು.

**ಸದಾಶಿವರಾಯ**

ವಂಶವೃಕ್ಷ ಕಾದಂಬರಿಯಲ್ಲಿ ಪ್ರಮುಖ ಪಾತ್ರದಲ್ಲಿ ಡಾ.ಸದಾಶಿವರಾಯರ ಪಾತ್ರವು ಒಂದು. ಇವರು ಮಹಾರಾಜ ಕಾಲೇಜಿನಲ್ಲಿ ಇತಿಹಾಸ ಪ್ರಾಧ್ಯಾಪಕರಗಿದ್ದರು. ಶ್ರೀನಿವಾಸಶ್ರೋತ್ರಿಯ ಮಗನ ಗುರುಗಳಾಗಿದ್ದರು. ರಾಯರು ಪ್ರಾಚೀನ ಭಾರತದ ಇತಿಹಾಸ, ಧರ್ಮ, ಸಂಸ್ಕೃತಿಗಳ ಬಗೆಗೆ ವಿಶೇಷ ಆಸಕ್ತಿವುಳ್ಳ ಅಧ್ಯಯನ ಶೀಲರಾಗಿದ್ದರು. ಸನಾತನ ಧರ್ಮ, ಸಂಸ್ಕೃತಿಗಳನ್ನ ಕುರಿತು ಶಾಸ್ತ್ರ ಗ್ರಂಥಗಳ

ಮೂಲ ಸಂಸ್ಕೃತ ಭಾಷೆಯಲ್ಲಿ ತಳಸ್ಪರ್ಶಿಯಾಗಿ ಅಧ್ಯಯನ ಮಾಡಿ ಪರಿಣಿತಿ ಹೊಂದಿದ್ದ ಶ್ರೀನಿವಾಸಶ್ರೋತ್ರಿಗಳನ್ನು ತಮ್ಮ ಗುರು ಸಮಾನರಾಗಿ ಭಾವಿಸಿದ್ದರು. ವೇದ ಉಪನಿಷತ್ತುಗಳು, ಧರ್ಮಶಾಸ್ತ್ರಗಳ ವಿಚಾರವಾಗಿ ಶ್ರೀನಿವಾಸ ಶ್ರೋತ್ರಿಗಳೊಡನೆ ಚರ್ಚಿಸಿ ತಮ್ಮ ಸಂದೇಹ ಪರಿಹರಿಸಿಕೊಳ್ಳಲು ನಂಜನಗೂಡಿನ ಶ್ರೀನಿವಾಸಶ್ರೋತ್ರಿಗಳ ಮನೆಗೆ ಬರುತ್ತಿದ್ದರು. ಡಾ.ಸದಾಶಿವರಾಯರು ಇಂಗ್ಲೀಷ್‌ನಲ್ಲಿ ಬರೆದ "ಪ್ರಾಚೀನ ಭಾರತೀಯ ರಾಜ್ಯಶಾಸ್ತ್ರಕ್ಕೆ ಧರ್ಮದ ಆಧಾರ" ಎಂಬ ಪುಸ್ತಕವನ್ನು ಲಂಡನ್ನಿನ ಒಂದು ಕಂಪನಿಯವರು ಪ್ರಕಟಿಸಿದ್ದರು. ಆ ಪ್ರತಿಯನ್ನು ಗೌರವ ಪೂರ್ವಕವಾಗಿ ಶ್ರೀನಿವಾಸಶ್ರೋತ್ರಿಯವರಿಗೆ ಅರ್ಪಿಸುವುದಕ್ಕಾಗಿ ಶ್ರೋತ್ರಿಯವರ ಮನೆಗೆ ಬಂದರು. ಅಲ್ಲಿ ತಮ್ಮ ಮಗ ಸತ್ತ ವಿಚಾರವನ್ನು ತಿಳಿಸಿದ ಶ್ರೋತ್ರಿಯವರಿಗೆ ಸಮಧಾನ ಮಾಡಿ ತಾನು ಮುಂದೆ "ಈ ದೇಶದ ಸಾಂಸ್ಕೃತಿಕ ಪರಂಪರೆಯನ್ನು ಇತಿಹಾಸಕಾರರು ತಿಳಿಯಬಹುದಾದ ಕಾಲದಿಂದ ಈ ದಿನದವರೆಗೂ ವರ್ಣಿಸಬೇಕೆಂದು ಆಕಾಂಕ್ಷೆ ತಮ್ಮ ಮನಸಿನಲ್ಲಿರುವುದಾಗಿಯು ಸುಮಾರು ಇಪ್ಪತ್ತೈದು ವರ್ಷಗಳಲ್ಲಿ ಬರೆದುಮುಗಿಸಿ ಐದು ಸಂಪುಟಗಳನ್ನು ಹೊರತರುವುದಾಗಿ ತಿಳಿಸಿದರು. ಇದಕ್ಕೆ ಶ್ರೀನಿವಾಸಶ್ರೋತ್ರಿಯವರ ಆಶಿರ್ವಾದ ಮತ್ತು ಸಹಾಯ ಮಾರ್ಗದರ್ಶನವನ್ನು ಬೇಕೆಂದು ವಿನಯದಿಂದ ತಿಳಿಸಿದರು. ಶ್ರೋತ್ರಿಯವರಿಂದ ಹಣದ ಸಹಾಯ ಪಡೆದು ಮೈಸೂರು ಮಹಾರಾಜರನ್ನು ಕಂಡು ಅವರಿಂಲೂ ಆರ್ಥಿಕ ಸಹಾಯ ಪಡೆದು ಬೃಹತ್ ಗ್ರಂಥ ರಚನೆಗೆ ತೊಡಗಿದರು.

ಸದಾಶಿವರಾಯ ತಮ್ಮ ಸೋದರ ಮಾವನ ಮಗಳಾಗಿದ್ದ ತನಗಿಂತ ಹತ್ತು ವರ್ಷ ಚಿಕ್ಕವಳಾದ ನಾಗಲಕ್ಷ್ಮಿಯನ್ನು ಮದುವೆಯಾಗಿದ್ದರು. ಮೊದಲಿನಿಂದಲೂ ವ್ಯಾಸಾಂಗ ಜೀವಿಯಾದ ರಾಯರು ಮದುವೆ ಬಗ್ಗೆಯಾಗಲಿ, ಕನ್ಯೆಯ ಬಗ್ಗೆಯಾಗಲಿ ಯೋಚಿಸಲಿಲ್ಲ. ಹಿರಿಯರ ನಿಶ್ಚಯದಂತೆ ಇವರಿಬ್ಬರ ಮದುವೆ ನಡೆದು ಹೋಯಿತು. ಮದುವೆಯಾದ ನಂತರವು ಓದಿನ ಬಗ್ಗೆ ಆಸಕ್ತಿ ಕಡಿಮೆಯಾಗಲಿಲ್ಲ. ಈಚೆಗಂತು ಗಂಭೀರವಾದ ಸಂಶೋಧನಾ ಗ್ರಂಥ ರಚನೆಯಲ್ಲಿ ತೊಡಗಿದ ಮೇಲೆ ಸಂಸಾರವನ್ನು ಅಗತ್ಯಕ್ಕಿಂತ ಹೆಚ್ಚು ಹಚ್ಚಿಕೊಂಡವರಲ್ಲ. ನಾಗಲಕ್ಷ್ಮಿಯೇ ಗಂಡನ ಬೇಕು-ಬೇಡಗಳನ್ನು ಅರ್ಥಮಾಡಿಕೊಂಡು ಕಾಲಕಾಲಕ್ಕೆ ಅವರ ಊಟ-ಉಪಚಾರಗಳನ್ನು ನಡೆಸಿಕೊಂಡು ಬಂದಿದ್ದಳು. ಮದುವೆಯಾದ ಆರು ವರ್ಷವಾದ ಮೇಲೆ ಇವರಿಗೆ ಗಂಡು ಮಗುವಾಯಿತು. ಆ ಮಗುವಿಗೆ ಪೃಥ್ವಿ ಎಂದು ಹೆಸರಿಟ್ಟರು.

ಗ್ರಂಥ ರಚನೆಯ ಕಾರ್ಯದಲ್ಲಿ ತೊಡಗಿದ ರಾಯರು ಭಾರತದ ಐತಿಹಾಸಿಕ ಸ್ಥಳಗಳಿಗೆ ಅಧ್ಯಯನಕ್ಕಾಗಿ ಒಂದು ತಿಂಗಳು ಪ್ರವಾಸ ಕೈಗೊಂಡರು. ಪ್ರವಾಸದ ಸಂಧರ್ಭದಲ್ಲಿ ಎಲ್ಲೋರದಿಂದ ಅಜಂತೆಗೆ ಬಂದ ರಾಯರಿಗೆ ಅಲ್ಲಿನ ಗುಹಾಂತರ ದೇವಾಲಯದ ರಚನೆ ಮತ್ತು ಅಲ್ಲಿನ ಚಿತ್ರಗಳನ್ನ ಸೂಕ್ಷ್ಮವಾಗಿ ಪರಿಶೀಲಿಸಿ ಟಿಪ್ಪಣಿ ಮಾಡಿಕೊಳ್ಳುತ್ತಿರುವಾಗ ಅವರಿಗೆ ಸಿಂಹಳದಿಂದ ಬಂದಿದ್ದ ಬೌದ್ಧಧರ್ಮೀಯರಾದ ಜಯರತ್ನ ದಂಪತಿಗಳ ಮಗಳಾದ ಕರುಣಾರತ್ನೆಯ ಪರಿಚಯವಾಯಿತು. ಈಕೆ ಇತಿಹಾಸ ವಿಷಯದಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿನಿ. ಸಂಶೋಧನೆಯಲ್ಲಿ ವಿಶೇಷ ಆಸಕ್ತಿ

ಹೊಂದಿದ್ದಳು. ಇವರಿಬ್ಬರಿಗೂ ಪರಸ್ಪರ ಪರಿಚಯವಾಯಿತು. ಡಾ.ರಾಯರ ವಿದ್ವತ್ತಿನಿಂದ ಪ್ರಭಾವಿತಳಾದ ಕರುಣಾರತ್ನೆ ಸಿಂಹಳದಿಂದ ಮೈಸೂರು ವಿಶ್ವವಿದ್ಯಾನಿಲಯಕ್ಕೆ ಸಂಶೋಧನಾ ವಿದ್ಯಾರ್ಥಿಯಾಗಿ ಬಂದು ಬೌದ್ಧಧರ್ಮದ ಹಿನ್ನೆಲೆಯಲ್ಲಿ ಸಿಂಹಳದ ಸಂಸ್ಕೃತಿ ಎಂಬ ವಿಷಯದ ಮೇಲೆ ಪಿ.ಎಚ್‌ಡಿ ಪದವಿಯನ್ನ ಡಾ. ಸದಾಶಿವರಾಯರ ಮಾರ್ಗದರ್ಶನದಲ್ಲಿ ಪಡೆದಳು. ನಂತರ ಸಿಂಹಳಕ್ಕೆ ಹೋಗಿ ಮತ್ತೆ ಬಂದು ಡಾ. ಸದಾಶಿವರಾಯರು ಸಂಶೋಧಿಸಿ ಬರೆಯುತ್ತಿದ್ದ ಗ್ರಂಥ ರಚನೆಗೆ ಸಹಾಯಕಿಯಾಗಿ ಕೆಲಸ ಮಾಡತೊಡಗಿದಳು.

ಡಾ. ಸದಾಶಿವರಾಯರು ಮತ್ತು ಕರುಣಾರತ್ನೆಯರ ಗುರು-ಶಿಷ್ಯೆ ಸಂಬಂಧವು ಮುಂದೆ ಸಾಗಿ ರಿಜಿಸ್ಟರ್ ಮ್ಯಾರೇಜ್ ಆದರು. ಕರುಣಾರತ್ನೆಯನ್ನ ಮದುವೆಯಾದರೂ ನಾಗಲಕ್ಷ್ಮಿಯನ್ನು ಅಲಕ್ಷಿಸಲಿಲ್ಲ. ಊಟ, ತಿಂಡಿ, ರಾತ್ರಿ ಮಲಗುವುದಕ್ಕೂ ಮನೆಗೆ ಬರುತ್ತಿದ್ದರು. ನಂತರ ಕರುಣಾರತ್ನೆಗೆ ಬೇರೆ ಮನೆ ಇರಿಸಿ ಅನಂತರ ಅಲ್ಲಿಯೇ ವಾಸಮಾಡತೊಡಗಿದ್ದರು. ತಾವು ಅಂದುಕೊಂಡಂತೆ 'ಪ್ರಾಚೀನ ಭಾರತೀಯ ರಾಜ್ಯಶಾಸ್ತ್ರಕ್ಕೆ ಧರ್ಮದ ಆಧಾರ' ಎಂಬ ಗ್ರಂಥವನ್ನ ಐದು ಸಂಪುಟಗಳನ್ನ ರಚಿಸಿ ಕೊನೆಯುಸಿರೆಳೆದರು. ಕರುಣಾರತ್ನ ತನ್ನ ದೇಶಕ್ಕೆ ರಾಯರು ಸತ್ತ ಮೇಲೆ ಸಂಶೋಧನ ಗ್ರಂಥದ ಪೂರ್ಣಕಾರ್ಯ ಮುಗಿಸಿ ಹೊರಟುಹೋದಳು. ಕಾದಂಬರಿಯಲ್ಲಿ ಸದಾಶಿವರಾಯರು ಪ್ರಮುಖ ಪಾತ್ರವಾಗಿ ಕಾದಂಬರಿಯ ಬೆಳವಣಿಗೆಗೆ ಕಾರಣವಾದ ಪಾತ್ರವಾಗಿದೆ.

### ಕಾತ್ಯಾಯಿನಿ

ವಂಶವೃಕ್ಷ ಕಾದಂಬರಿಯಲ್ಲಿ ಬರುವ ಪ್ರಮುಖ ಪಾತ್ರ ಕಾತ್ಯಾಯಿನಿ. ಈಕೆ ಶ್ರೀನಿವಾಸಶ್ರೋತ್ರಿಯ ಮಗ. ನಂಜುಂಡಶ್ರೋತ್ರಿಯ ಹೆಂಡತಿ. ಕಪಿಲಾ ನದಿಯ ಪ್ರವಾಹದ ಸುಳಿಗೆ ಸಿಕ್ಕ ಗಂಡ ಸತ್ತ ಮೇಲೆ ಆತನ ನೆನಪೆನಲ್ಲಿಯೇ ದುಃಖದಿಂದ ಕಾಲದೂಕುವ ಅವಳ ಬಾಳಿಗೆ ಮಗ ಚೀನಿ ಸ್ವಲ್ಪಮಟ್ಟಿಗೆ ಆಕೆಯ ದುಃಖವನ್ನು ಕಡಿಮೆ ಮಾಡಿದನು. ಈಕೆಯನ್ನು ಅತ್ತೆ-ಮಾವಂದಿರು ತಮ್ಮ ಮಗಳಂತೆ ಪ್ರೀತಿಯಿಂದ ನೋಡಿಕೊಳ್ಳತೊಡಗಿದ್ದರು. ಬ್ರಾಹ್ಮಣ ಧರ್ಮದ ಪ್ರಕಾರ ಗಂಡ ಸತ್ತ ಹೆಣ್ಣಿಗೆ ಮಾಡುವ ಸಂಪ್ರದಾಯದ ರೀತಿಯಲ್ಲಿ ಯಾವ ಪದ್ಧತಿಗಳನ್ನ ಮಾಡಿಸದೆ ಸಹಜವಾಗಿಯೇ ಇರುವಂತೆಯೇ ನೋಡಿಕೊಂಡರು. ಮೊದಮೊದಲು ಮಗುವಿನ ಬೆಳವಣಿಗೆಯಲ್ಲಿ ಹೆಚ್ಚು ಆಸಕ್ತಿ ತೋರುತ್ತ ತನ್ನ ನೋವನ್ನು ಮರೆತ ಈಕೆ ಮಗ ಬೆಳೆದು ದೊಡ್ಡವನಾದೆಂತೆಲ್ಲ ಮನೆಯಲ್ಲಿ ಕಾಲಕಳೆಯುವುದು ಕಷ್ಟವಾಯಿತು. ತಮ್ಮ ಮಗ ಬಿ.ಎ., ಪದವಿಯನ್ನು ಅರ್ಧದಲ್ಲೆ ಬಿಟ್ಟ ಸತ್ತದ್ದರಿಂದ ಅದನ್ನು ತಾನು ಪೂರೈಸುವುದಾಗಿ ಮಾವನಿಗೆ ತನ್ನ ಮನದ ಇಂಗಿತವನ್ನು ತಿಳಿಸಿದಳು. ಮೊದಲು ಅತ್ತೆ ವಿರೋಧಿಸಿದರು ಮಾವ ಅದಕ್ಕೆ ಸಮ್ಮತಿ ನೀಡಿದನು. ಕಾತ್ಯಾಯಿನಿ ಮೈಸೂರಿನ ಕಾಲೇಜಿಗೆ ಸೇರಿದ ಮೇಲೆ ರೈಲಿನಲ್ಲಿ ನಿತ್ಯ ಪ್ರಯಾಣ ಮಾಡುತ್ತ ಕಾಲೇಜಿಗೆ ಬರತೊಡಗಿದಳು. ಮೈಸೂರಿನಲ್ಲಿನ ಡಾ. ಸದಾಶಿವರಾಯರ ಪರಿಚಯದ ಮೂಲಕ ಕಾಲೇಜಿನ ಬಿಡುವಿನ ವೇಳೆಯಲ್ಲಿ ಅವರ ಮನೆಗೆ ಬರುತ್ತಿದ್ದಳು. ಅವಳು ಓದುತ್ತಿದ್ದ ಕಾಲೇಜಿನಲ್ಲಿಯೇ ಡಾ.

ಸದಾಶಿವರಾಯರ ತಮ್ಮ ರಾಜರಾಯನು ಇಂಗ್ಲೀಷ್ ಅಧ್ಯಾಪಕನಾಗಿದ್ದು, ಕಾತ್ಯಾಯಿನಿಯ ಪರಿಚಯವಾಯಿತು.

ರಾಜರಾಯರ ನಾಟಕದ ಬಗ್ಗೆ ಹೆಚ್ಚು ಆಸಕ್ತಿ ಹೊಂದಿದ್ದು, ನಾಟಕಗಳನ್ನ ರಚಿಸಿ ಕಾಲೇಜಿನಲ್ಲಿ ಅವುಗಳನ್ನ ವಿದ್ಯಾರ್ಥಿಗಳಿಂದ ಪಾತ್ರಮಾಡಿಸಿ ತಾನು ಪಾತ್ರಗಳನ್ನ ಮಾಡುತ್ತ ಇಡೀ ಕಾಲೇಜಿನಲ್ಲಿ ಪ್ರಸಿದ್ಧಿ ಪಡೆದಿದ್ದನು. ಇಂಗ್ಲೀಷ್ ಪಾಠಮಾಡುವಾಗ ಇಡೀ ತರಗತಿಯಲ್ಲಿನ ಆತನ ಪಾಠವು ಎಲ್ಲಾ ವಿದ್ಯಾರ್ಥಿಗಳಿಗೂ ಅಚ್ಚು–ಮೆಚ್ಚು. ಕಾತ್ಯಾಯಿನಿಯ ಪರಿಚಯ ಆದಮೇಲೆ ಆಕೆಯ ಮೇಲೆ ಪ್ರೀತಿಯ ಭಾವನೆ ಮೂಡಿತು. ಮೂಲತತ್ವ ಎಂಬ ನಾಟಕದಲ್ಲಿ ಕಾತ್ಯಾಯಿನಿ ಪ್ರಕೃತಿ ಪಾತ್ರವಾಗಿ ರಾಜರಾಯ ಪುರುಷ ಪಾತ್ರವಾಗಿ ಅಭಿನಯಿಸಿದ್ದರು. ಮುಂದೆ ಮದುವೆಯ ವಿಚಾರವನ್ನು ರಾಜರಾಯನು ಪ್ರಸ್ತಾಪಿಸಿದಾಗ ಮೊದಲು ತಿರಸ್ಕರಿಸಿದ ಆಕೆ ಒಂದುವಾರ ಕಾಲೇಜಿಗೆ ರಜೆ ಹಾಕಿದಳು. ನಂತರ ರಾಜರಾಯನ್ನ ಬಿಟ್ಟಿರಲು ಸಾಧ್ಯವಿಲ್ಲದೆ ಆತನನ್ನ ಮದುವೆ ಆಗುವ ನಿರ್ಧಾರಕ್ಕೆ ಬಂದು, ಈ ವಿಚಾರಯವನ್ನು ಹೇಗೆ ಮಾವನವರಿಗೆ ತಿಳಿಸಬೇಕೆಂದು ಯೋಚಿಸಿ ರಾತ್ರಿಯಲ್ಲ ನಿದ್ರೆಗೆಟ್ಟು ಕೊನೆಗೆ ಬರೆದು ಅಂಚೆಗೆ ಹಾಕಿ ರಾಜರಾಯನನ್ನು ಮದುವೆಯಾದಳು. ತನ್ನ ಮಗನನ್ನ ಜೊತೆಯಲ್ಲಿ ಕಳುಹಿಸಿ ಎಂದು ಕೇಳಿಕೊಂಡಳು. ಮಾವ ಅತ್ತೆ ಇದಕ್ಕೆ ನಿರಾಕರಿಸಿದಾಗ ಮಗನ ಮೇಲಿನ ಯಾವ ಅಧಿಕಾರವು ಇಲ್ಲವಾಗಿ ತಾನು ಎಂ.ಎ. ಪದವಿಯನ್ನು ಮುಗಿಸಿ ಕಾಲೇಜಿನಲ್ಲಿ ಅಧ್ಯಾಪಕಿ ಆದಳು. ನಂತರ ಮೂರು ಬಾರಿ ಗರ್ಭಿಣಿಯಾದರೂ ಮದ್ಯೆದಲ್ಲಿಯೇ ಗರ್ಭಪಾತವಾಯಿತು. ಮಗ ನಂಜುಂಡಶ್ರೋತ್ರಿಯು ಅದೇ ಕಾಲೇಜಿಗೆ ಸೇರಿದಾಗ ಆತನನ್ನ ಕಂಡು ಆಕೆ ಅತೀವ ಸಂತೋಷವನ್ನು ಅನುಭವಿಸಿದಳು. ಅವನನ್ನ ಮನೆಗೆ ಕರೆದುಕೊಂಡು ಹೋದಳು. ಮಗ ಆಕೆಯನ್ನ ತಿರಸ್ಕರಿಸಿ, ಕಾಲೇಜನ್ನ ಬಿಟ್ಟ ಬೇರೆ ಕಾಲೇಜು ಸೇರಿಕೊಂಡಾಗ ಅತೀವವಾದ ನೋವನ್ನ ಅನುಭವಿಸಿದಳು. ಕೊನೆ ಅದೇ ಮಾನಸಿಕ ಚಿಂತೆಯಲ್ಲಿ ಕೊರಗಿ ಹಾಸಿಗೆ ಹಿಡಿದು ಸಾಯುವ ಸ್ಥಿತಿಯಲ್ಲಿ ಮಗನನ್ನ ಕಾಣುವ ಮತ್ತು ಮಾವನಲ್ಲಿ ಕ್ಷಮೆ ಕೇಳುವ ಇಂಗಿತ ವ್ಯಕ್ತಪಡಿಸಿದಳು. ತನ್ನ ಈ ಸ್ಥಿತಿಗೆ ತಾನು ಮಾಡಿದ ಕರ್ಮದ ಫಲವೇ ಎಂದು ಭಾವಿಸಿ ಪಶ್ಚಾತಾಪ ಪಟ್ಟಳು. ಕೊನೆಗೆ ಮಗನಿಂದಲ್ಲೇ ಸಂಸ್ಕಾರ ಕಾರ್ಯ ನಡೆಯಬೇಕೆಂಬ ಇಚ್ಛೆಯಂತೆ ತಾತನ ಮಾತಿನ ಮೇರೆಗೆ ಮಗ ಚೀನಿ ಸಂಸ್ಕಾರ ವಿಧಿಗಳನ್ನ ನೆರವೇರಿಸಿದನು.



ಕಾತ್ಯಾಯಿನಿಯ ಪಾತ್ರ ಕಾದಂಬರಿಯಲ್ಲಿ ಪ್ರಗತಿಪರ ಧೋರಣೆಯನ್ನು ಹೊಂದಿರುವ ಪಾತ್ರವಾಗಿ ಕಾದಂಬರಿಯಲ್ಲಿ ಕಂಡುಬರುತ್ತಾಳೆ. ಆದರೆ ಕೊನೆಯಲ್ಲಿ ತನ್ನ ಸ್ಥಿತಿಗೆ ತಾನು ಮಾಡಿದ ಪಾಪವೇ ಇದಕ್ಕೆ ಕಾರಣವೆಂದು ಪಶ್ಚಾತಾಪ ಪಡುವಂತೆ ಲೇಖಕರು ಚಿತ್ರಿಸಿದ್ದಾರೆ.

**ರಾಜರಾಯ**

ಕಾದಂಬರಿಯಲ್ಲಿ ಬರುವಂತ ಮತ್ತೊಂದು ಪ್ರಮುಖಪಾತ್ರ ರಜರಾಯನ ಪಾತ್ರ, ಈತ ಡಾ. ಸದಾಶಿವರಾಯನ ತಮ್ಮ, ಅತ್ತಿಗೆ ನಾಗಲಕ್ಷ್ಮಿಯು ಈತನು ಒಂದೇ ವಯಸ್ಸಿನವರು ಇಂಗ್ಲೀಷಿನಲ್ಲಿ ಎಂ.ಎ ಪದವಿ ಪಡೆದು ಅದೇ ಕಾಲೇಜಿನಲ್ಲಿ ಉಪನ್ಯಾಸಕನಾಗಿ ಕೆಲಸ ಮಾಡಿದ ಮೇಲೆ ರಾಜರಾಯನಿಗೆ ಇಂಗ್ಲೆಂಡಿಗೆ ಹೋಗಿ ಓದಿಬರುವ ಒಂದು ವಿದ್ಯಾರ್ಥಿವೇತನ ದೂರಕಿತು. ವ್ಯಾಸಂಗ ಮುಗಿಸಿ ಹಿಂದಿರುಗಿ ಬಂದ ಮೇಲೆ ಕಾಲೇಜಿನ ಕಲಾ ಜೀವನಕ್ಕೆ ಒಂದು ಹೊಸ ಜೀವಕಳೆ ಬಂತು. ನಾಟಕದ ಬಗ್ಗೆ ಆಸಕ್ತಿ ಹೊಂದಿದ್ದ ರಾಜರಾಯರು ಕೆಲವು ನಾಟಕಗಳನ್ನು ರಚಿಸಿ ರಂಗದ ಮೇಲೆ ಯಶಸ್ವಿಯಾಗುವಂತೆ ಮಾಡಿದ. ಅತ್ತಿಗೆಯ ಸ್ನೇಹಿತನಂತೆ ಆಕೆಯನ್ನು ಮತ್ತು ಅಣ್ಣನ ಮಗನಾದ ಪೃಥ್ವಿಯನ್ನು ಬಹಳ ಪ್ರೀತಿಯಿಂದ ನೋಡುಕೊಳ್ಳುತ್ತಿದ್ದ. ಅಣ್ಣನ ಗ್ರಂಥ ರಚನಾ ಕಾರ್ಯದ ಬಗ್ಗೆ ಅತೀವ ಗೌರವಹೊಂದಿದ್ದು ಆ ವಿಚಾರದಲ್ಲಿ ಅತ್ತಿಗೆಗೆ ಸಮಾಧಾನ ಹೇಳುತ್ತಿದ್ದ.

ಕಾಲೇಜಿನಲ್ಲಿ ಉತ್ತಮ ಅಧ್ಯಾಪಕನಾಗಿ ಕಾರ್ಯ ನಿರ್ವಹಿಸುತ್ತ, ಷೇಕ್ಸ್‌ಪೀಯರನ ನಾಟಕವನ್ನ ಪಾಠಮಾಡುವಾಗ ತಾನೇ ಪಾತ್ರದ ರೀತಿಯಲ್ಲಿ ಭಾವತುಂಬಿ ಭೋದಿಸುತ್ತಿದ್ದ. ವಿದ್ಯಾರ್ಥಿಗಳು ತನ್ಮಯತೆಯಿಂದ ಕೇಳುವಂತೆ ಬೋಧಿಸುತಾ ಎಲ್ಲ ಮೆಚ್ಚಿನ ಅಧ್ಯಾಪಕನಾಗಿದ್ದನು. ಮಾವನವರ ಒಪ್ಪಿಗೆ ಪಡೆದು ಕಾಲೇಜು ಸೇರಿಕೊಂಡ ಕಾತ್ಯಾಯಿನಿ ಬಿಡುವಿನ ವೇಳೆಯಲ್ಲಿ ನಾಗಲಕ್ಷ್ಮಿಯ ಜೊತೆಗೆ ಕಾಲಕಳೆಯಲು ಸದಾಶಿರಾಯರ ಮನೆಗೆ ಬರುತ್ತಿದ್ದಳು. ಅಲ್ಲಿ ರಾಜರಾಯರ ಪರಿಚಯ ಮತ್ತಷ್ಟು ಹೆಚ್ಚಾಗಿ ರಾಜರಾಯನು ತಾನು ಮದುವೆಯೇ ಬೇಡವೆಂದಿದ್ದವನು ಕಾತ್ಯಾಯಿನಿಯನ್ನು ನೋಡಿದ ಮೇಲೆ ಅತ್ತಿಗೆಯ ಬಳಿಯಲ್ಲಿ ಮದುವೆಯ ವಿಚಾರವನ್ನು ಪ್ರಸ್ತಾಪಿಸಿದನು. ಕಾತ್ಯಾಯಿನಿ ಮತ್ತು ರಾಜರಾಯರ ನಡುವಿನ ಗುರು-ಶಿಷ್ಯರ ಸಂಬಂಧ ಅತ್ಯಂತ ಸಲುಗೆಯ ಸ್ನೇಹವಾಗಿ ಅನಂತರ ಪರಸ್ಪರ ಪ್ರೀತಿಯ ಭಾವನೆ ಉಂಟಾಯಿತು. ರಾಜರಾಯರು ತಾನು ರಚಿಸಿದ ನಾಟಕದಲ್ಲಿ ಪಾತ್ರಮಾಡುವಂತೆ ಕಾತ್ಯಾಯಿನಿಯನ್ನ್ನೆ ಕೇಳಿಕೊಂಡಾಗ ನನ್ನಿಂದ ಸಾದ್ಯವಿಲ್ಲವೆಂದು ಕಾತ್ಯಾಯಿನಿ ಹೇಳಿದ್ದರು ನೀನಲ್ಲದೆ ಈ ಪಾತ್ರಕ್ಕೆ ಜೀವ ತುಂಬುವ ಪಾತ್ರವನ್ನು ಬೇರೆಯಾರು ಮಾಡಲಾರರು ಎಂದು ಆಕೆಯನ್ನು ಒಪ್ಪಿಸಿ ಮೂಲತತ್ವದಲ್ಲಿ ಪ್ರಕೃತಿಯ ಪಾತ್ರವನ್ನು ಕಾತ್ಯಾಯಿನಿಯಿಂದ ಮಾಡಿಸಿದನು. ಹೀಗೆ ಇಬ್ಬರಲ್ಲೂ ಸಲುಗೆ ಹೆಚ್ಚಾಗಿ ಇಬ್ಬರೂ ಪ್ರೀತಿಯನ್ನು ಹೇಳಿಕೊಂಡರು. ಕಾತ್ಯಾಯಿನಿಯು ರಾಜರಾಯರನ್ನು ಮದುವೆಯಾಗುವ ವಿಚಾರವಾಗಿ ಮಾವ ಶ್ರೋತ್ರಿಯವರಿಗೆ ಪತ್ರದ ಮೂಲಕ ತಿಳಿಸಿದಳು. ಒಪ್ಪದಿದ್ದಾಗ ಒಂದು ವಾರ ಸುಮ್ಮನಿದ್ದು ನಂತರ ಮೈಸೂರಿನಲ್ಲಿ ಅಧ್ಯಾಪಕಿಯ ಮದುವೆ ಇದೆ ಎಂದು ಹೇಳಿ ರಾಜರಾಯರನ್ನ ಮದುವೆಯಾದಳು. ಕಾತ್ಯಾಯಿನಿಯನ್ನ ಮದುವೆಯಾದ ನಂತರ ಬೆಂಗಳೂರಿಗೆ ವರ್ಗವಾದರು. ಅವಳಿಗೂ ಎಂ.ಎ. ಪದವಿಯ ವ್ಯಾಸಂಗ ಮಾಡಿಸಿ ಅವಳು ಅದೇ ಕಾಲೇಜಿನಲ್ಲಿ ಅಧ್ಯಾಪಕಿ ವೃತ್ತಿ ಆರಂಭಿಸಿದಳು. ಕಾದಂಬರಿಯಲ್ಲಿ ಬರುವ ಪ್ರಮುಖ ಪಾತ್ರವಾದ ರಾಜರಾಯ ಪೃಥ್ವಿಗೆ ಪ್ರೀತಿ ಚಿಕ್ಕಪ್ಪನಾಗಿ, ನಾಗಲಕ್ಷ್ಮಿಗೆ ಒಳ್ಳೆಯ ಮೈದುನನಾಗಿ, ಕಾಲೇಜಿನಲ್ಲಿ ಉತ್ತಮ ಅಧ್ಯಾಪಕನಾಗಿ, ವಿಧವೆಯಾದ

ಕಾತ್ಯಾಯಿನಿಯ ಬದುಕಿಗೆ ಅರ್ಥಕೊಡುವ ಪತಿಯಾಗಿ ಕಾದಂಬರಿಯ ಬೆಳವಣಿಗೆ ಪ್ರಮುಖ ಪಾತ್ರವಾಗಿ ಬಂದಿದ್ದಾನೆ. ಆದರ್ಶ ನಾಟಕದ ಬಗೆಗಿನ ಆಸಕ್ತಿ ಆ ಮೂಲಕ ಕಾತ್ಯಾಯಿನಿ ಇವರ ಸಂಬಂಧ. ಅಣ್ಣನ ಪರಿಸ್ಥಿತಿಯನ್ನು ಅರ್ಥಮಾಡಿಕೊಂಡು ಅಣ್ಣನಿಗೆ ಎರಡನೇ ಮದುವೆಗೆ ಸಹಾಯ. ನಾಗಲಕ್ಷ್ಮಿಗೆ ಈ ವಿಚಾರವಾಗಿ ಸಮಾಧಾನ ಮಾಡುವ ರಾಜರಾಯ ಕಾದಂಬರಿಯ ಪ್ರಮುಖವಾಗಿ ನಿಲ್ಲುವಂತಹ ಆದರ್ಶವ್ಯಕ್ತಿಯಾಗಿ ಕಾದಂಬರಿಕಾರರು ಚಿತ್ರಿಸಿದ್ದಾರೆ. ಕಾದಂಬರಿಯ ಕೊನೆಗೆ ಕಾತ್ಯಾಯಿನಿ ಮಾನಸಿಕ ಒತ್ತಡದಿಂದ ಅನಾರೋಗ್ಯಳಾದ ಸ್ಥಿತಿಯಲ್ಲಿ ಮಗ ಮತ್ತು ಮಾವನನ್ನು ನೋಡುವ ಇಂಗಿತವನ್ನು ಅರಿತು ಅವರನ್ನು ಕರೆಸುವ ಶ್ರೋತ್ರಿಯ ಜೊತೆಗೆ ತಾನು ಮೊದಲೆ ನಿಮ್ಮ ಬೇಟಿಯಾಗಿದ್ದರೆ ನಾನು ಮದುವೆಯನ್ನೇ ಆಗುತ್ತಿರಲಿಲ್ಲ ಎಂದು ಹೇಳುತ್ತ ಅವರ ಈ ಸ್ಥಿತಿಗೆ ತಾನೇ ಕಾರಣವೆಂಬ ಪಶ್ಚಾತ್ತಾಪದ ಮಾತುಗಳನ್ನಾಡುವ ರಾಜರಾಯನು ಕಾದಂಬರಿ ಮುಖ್ಯ ಪಾತ್ರನಾಗಿದ್ದಾನೆ.

**ಭಾಗೀರತಮ್ಮ**

ಭಾಗೀರಥಮ್ಮನ ಪಾತ್ರವು ಕಾದಂಬರಿಯಲ್ಲಿ ಬರುವಂತ ಚಿಕ್ಕಪಾತ್ರವಾದರು ಮುಖ್ಯವಾದ ಪಾತ್ರವಾಗಿದೆ. ಈಕೆ ಶ್ರೀನಿವಾಸ ಶ್ರೋತ್ರಿಯವರ ಹೆಂಡತಿ ಮದುವೆಯಾದ ಮೂರು ವರ್ಷದ ನಂತರ ಈಕೆ ಗರ್ಭಿಣಿಯಾದಳು. ನಂತರ ಮೈಸೂರಿನ ಆಸ್ಪತ್ರೆಯಲ್ಲಿ ಹೆರಿಗೆ ಆಯಿತು. ಒಂದು ತಿಂಗಳು ಅಲ್ಲಿಯೇ ಮನೆಗೆ ಕರೆದು ಕೊಂಡುಹೋಗುವ ದಿನ ತಾಯಿಯ ಗರ್ಭಕೋಶದ ಅಳತೆಗಿಂತ ದೊಡ್ಡದಾಗಿ ಮಗು ಬೆಳೆದಿತ್ತು. ನಿಮ್ಮದು ಅಸಮದಾಂಪತ್ಯ ಈ ಸಲ ಆಪರೇಷನ್ ಮಾಡಿದ್ದರಿಂದ ತಾಯಿಯ ಪ್ರಾಣ ಉಳಿಯಿತು. ಆಕೆ ಮತ್ತೆ ಗರ್ಭಿಣಿಯಾದರೆ ಸಾವು ಖಂಡಿತ. ನೀವು ಇನ್ನು ಮೇಲೆ ದೈಹಿಕ ಸಂಬಂಧ ನಿಲ್ಲಿಸಬೇಕೆಂದು ಡಾಕ್ಟರ್ ಹೇಳಿದ್ದಾರೆ. ಅದೇ ವಿಷಯವನ್ನು ನರ್ಸ್ ಭಾಗೀರತಮ್ಮನಿಗೆ ತಿಳಿಸಿದಳು. ಗಂಡನ ಪರಿಸ್ಥಿತಿಯನ್ನು ಅರಿತ ಭಾಗೀರತಮ್ಮ ತಾನು ಕೊಡಲಾರದ ದೇಹ ಸುಖಕ್ಕೆ ಬದಲಾಗಿ ಅವಳು ಮೊದಲಿಗಿಂತಲೂ ಹೆಚ್ಚು ಭಕ್ತಿ ಶ್ರದ್ಧೆಗಳಿಂದ ಪತಿ ಸೇವೆ ಮಾಡಿದಳು. ಗಂಡ ದೈಹಿಕ ಶ್ರಮದ ಕೆಲಸ ಮಾಡುವುದು ಮತ್ತು ಆಹಾರದಲ್ಲಿ ಹಾಲು, ಮೊಸರು, ತುಪ್ಪವನ್ನು ಬಳಸದೇ ಇರುವುದು ಇದರಿಂದ ಅವನ ದೇಹ ಕೃಶವಾಗಿರುವುದನ್ನು ಕಂಡು ಮರುಗಿ ಹೋಗಿ ಹೀಗೆ ಮಾಡಿದರೆ ಗತಿ ಏನು ಎಂದು ತಿಳಿದು ತಂದೆಗೆ ಪತ್ರ ಬರೆದು ಕರೆಯಿಸಿ ಊರಿನಲ್ಲಿದ್ದ ತನ್ನ ಅವಿವಾಹಿತ ತಂಗಿಯನ್ನು ಮದುವೆ ಮಾಡುವಂತೆ ಬೇಡಿಕೊಂಡಳು. ಪತಿಭಕ್ತೆಯಾದ ಹೆಂಡತಿ ಇರುವಾಗ ಮತ್ತೊಂದು ಮದುವೆ ಬೇಡವೆಂದು ಗಂಡ ನಿರಾಕರಿಸಿದಾಗ, ಮತ್ತೊಂದು ಅಸಾಧಾರಣ ಸಾಧ್ಯತೆಯನ್ನು ಯೋಚಿಸಿ ಕಾರ್ಯಪ್ರವೃತ್ತಳಾದಳು. ತನ್ನ ಮನೆಯ ಕೆಲಸದ ಆಳಾಗಿದ್ದ ಲಕ್ಷ್ಮಿಯು ತನ್ನ ಹತ್ತಿರವೇ ಮಲಗುತ್ತಿದ್ದಳು. ಒಂದು ದಿನ ಪ್ರಾಸಂಗಿಕವಾಗಿ ಗಂಡನ ಆರೋಗ್ಯದ ಬಗ್ಗೆ ಕಳವಳ ವ್ಯಕ್ತಪಡಿಸಿದಳು. ಲಕ್ಷ್ಮಿಗೂ ಕೂಡ ಶ್ರೋತ್ರಿಯ ಸುಖ-ದುಃಖ, ಆರೋಗ್ಯದ ಬಗ್ಗೆ ಕಾಳಜಿ ಇದ್ದ ಲಕ್ಷ್ಮಿಯನ್ನು ಭಾಗೀರತಮ್ಮ ನೇರವಾಗಿ ಈ ರೀತಿ ಹೇಳಿದಳು. "ಹೊರಗಿನ ಯಾರಿಗೂ ಗೊತ್ತಾಗುಲ್ಲ" ನೀನು ಅವರ ಜೊತೆ ನಡೆದುಕೊಂಡಿರು

ಹೆಂಡತಿಯಾಗಿಯೂ ಹೀಗಿರೋದು ನನ್ನ ಹಣೆಯಲ್ಲಿ ಬರೆದಿತ್ತು. ಎಂದು ಕಣ್ಣೀರು ತುಂಬಿಕೊಂಡಳು. ಭಾಗೀರತಮ್ಮನ ಸಲಹೆ ಲಕ್ಷ್ಮಿಗೆ ಆಶ್ಚರ್ಯವಾಯಿತು. ಈ ಸಲಹೆಯನ್ನು ಸುಲಭವಾಗಿ ಒಪ್ಪದೆ ಸುಮಾರು ಹದಿನೈದು ದಿನ ಇದೇ ಮಾತು ಮತ್ತೆ ಮತ್ತೆ ಹೇಳಿದಾಗ ಒಂದು ರಾತ್ರಿ ಅವರೂ ಒಪ್ಪಿದರೆ ಆಗಲಿ ಎಂದಿದ್ದಳು. ಆದರೆ ಪತಿ ಶ್ರೋತ್ರಿಯ ಸುಲಭವಾಗಿ ಒಪ್ಪಲಿಲ್ಲ ತಾನು ಕೊಡದ ದೇಹದ ಸುಖಕ್ಕೆ ಪತಿಗೆ ಲಕ್ಷ್ಮಿಯಿಂದ ಸಿಗಲಿ ಎನ್ನುವ ಆಸೆ ಮತ್ತು ತನ್ನ ಸ್ಥಿತಿಯ ಬಗ್ಗೆ ಆಕೆ ಸಂಕಟವನ್ನು ವ್ಯಕ್ತಪಡಿಸಿದಳು.

ಸೊಸೆ ಕಾತ್ಯಾಯಿನಿ ಕಾಲೇಜಿಗೆ ಸೇರುವ ವಿಚಾರದಲ್ಲಿ ವಿರೋಧ ವ್ಯಕ್ತಪಡಿಸಿದರೆ ಏಕೆ ಮಗಳಂತೆ ನೋಡಿಕೊಳ್ಳುತ್ತಿದ್ದ ಸೊಸೆ ಇನ್ನೊಂದು ಮದುವೆ ಆಗುವ ವಿಚಾರದಿಂದ ಆಕೆಯನ್ನು ಬೈದಳು. ಮಗ ಸತ್ತಾಗ ಆಕೆಗೆ ಆದ ನೋವು, ಆ ನೋವನ್ನು ಮೊಮ್ಮಗ ಚೀನಿಯ ಬೆಳವಣಿಗೆಯಲ್ಲಿ ಮರೆತು ಖುಷಿಪಟ್ಟಳು. ಕಾದಂಬರಿಯಲ್ಲಿ ಬರುವ ಚಿಕ್ಕಪಾತ್ರವಾದರು ಈ ಪಾತ್ರದ ಮೂಲಕ ಗಂಡನಿಗೆ ಎರಡನೆ ಮದುವೆ ಮಾಡುವ ಹಾಗೂ ಲಕ್ಷ್ಮಿಯನ್ನು ಗಂಡನ ಜೊತೆ ನಡೆದುಕೊಳ್ಳುವಂತೆ ಹೇಳುವ ಮಾತುಗಳನ್ನು ಉದಾರವಾದ ಹೆಣ್ಣಾಗಿ ಕಂಡು ಬರುತ್ತಾಳೆ. ಸೊಸೆ ಕಾಲೇಜು ಸೇರಬಯಸುವ ವಿಚಾರದಲ್ಲಿ ವಿರೋದವ್ಯಕ್ತಪಡಿಸಿ ನಂತರ ಅಸಮ್ಮತಿಯನ್ನು ಸೂಚಿಸುತ್ತಾಳೆ. ರಾಜರಾಯನನ್ನು ಮದುವೆಯಾದ ಸೊಸೆಗೆ ಶಾಪ ಹಾಕುತ್ತಾಳೆ. ಒಟ್ಟಾರೆ ಕಾದಂಬರಿಯಲ್ಲಿ ಬರುವಂತ ಮುಖ್ಯಪಾತ್ರದಂತೆಯೇ ಈಕೆಯ ಪಾತ್ರ ನಿಲ್ಲುತ್ತದೆ.

**ನಾಗಲಕ್ಷ್ಮಿ**

ಸದಾಶಿವರಾಯರ ಹೆಂಡತಿ ನಾಗಲಕ್ಷ್ಮಿ ರಾಯರಿಗಿಂತ ಹತ್ತು ವರ್ಷ ಚಿಕ್ಕವಯಸ್ಸಿನವಳು. ಮೈದುನ ರಾಜರಾಯ ಮತ್ತು ನಾಗಲಕ್ಷ್ಮಿ ಸಮವಯಸ್ಕರು. ರಾಯರಿಗೆ ಸೋದರ ಮಾವನ ಮಗಳು. ಮಿಢಲ್‌ಸ್ಕೂಲ್ ದಾಟುವಷ್ಟು ಹಣೆಯಲ್ಲಿ ಬರೆದಿರಲಿಲ್ಲ. ಮೊದಲಿಂದಲು ವ್ಯಾಸಂಗ ಜೀವಿಯಾದ ರಾಯರನ್ನು ಮದುವೆಯಾಗುವ ಬಗ್ಗೆ ಯೋಚಿಸಿದವಳೇ ಅಲ್ಲ. ಆದರೆ ಹಿರಿಯರ ನಿಶ್ಚಯದಂತೆ ಇವರ ಮದುವೆ ನೆರವೇರಿತು. ಮದುವೆಯಾದ ಮೇಲು ರಾಜರಾಯರು ವ್ಯಾಸಂಗವನ್ನು ಮುಂದುವರೆಸಿದರು. ಈಚೆಗಂತು ಬೃಹತ್ ಗ್ರಂಥದ ರಚನ ಕಾರ್ಯಕ್ಕೆ ತೊಡಗಿದ ಮೇಲೆ ಸಂಸಾರವನ್ನು ಅಗತ್ಯಕ್ಕಿಂತ ಹೆಚ್ಚು ಹಚ್ಚಿಕೊಂಡವರಲ್ಲ. ನಾಗಲಕ್ಷ್ಮಿಯು ಮಾತ್ರ ಪತಿದೇವರ ಬೇಕು ಬೇಡಗಳನ್ನು ಅರ್ಥಮಾಡಿಕೊಂಡು ಕಾಲಕಾಲಕ್ಕೆ ಅವರ ಊಟ-ಉಪಚಾರಗಳನ್ನು ಅತ್ಯಂತ ಶ್ರದ್ಧಾಭಕ್ತಿಗಳಿಂದ ನಡೆಸಿಕೊಂಡು ಬರುತ್ತಿದ್ದಳು. ವಾರ-ಹದಿನೈದು ದಿನಗಳಿಗೊಮ್ಮೆ ಎಣ್ಣೆತಟ್ಟಿ ಅಭ್ಯಂಜನ ಮಾಡಿಸುತಿದ್ದಳು. ಮದುವೆಯಾದ ಆರು ವರ್ಷದ ಮೇಲೆ ಒಂದು ಗಂಡು ಮಗುವಾಯಿತು. ಅದಕ್ಕೆ ಪೃಥ್ವಿ ಎಂಬ ಹೆಸರನ್ನಿಟ್ಟರು. ರಾಯರು ಸಂಶೋಧನ ವಿಷಯವಾಗಿ ಬೇರೆ ಬೇರೆ ಸ್ಥಳಗಳಿಗೆ ಭೇಟಿ ನೀಡಿದ ಸಮಯದಲ್ಲಿ ಮಗನ ಜೊತೆ ಬೇಸರದಿಂದ ಕಾಲಕಳೆಯುತ್ತಿದ್ದಳು. ತಾನು ಪತಿಯನ್ನು ಎಷ್ಟೇ ಪ್ರೀತಿಸಿದರು ಪತಿ ಮಾತ್ರ ಅಧ್ಯಯನ ನಿರತನಾಗಿರುತ್ತಿದ್ದ. ಇದರಿಂದ ಆಕೆಗೆ ಬೇಸರವಾದರು ಮೈದನ ರಾಜರಾಯ ಆಕೆಯನ್ನು ಸಮಾಧಾನ

ಮಾಡುತ್ತಿದ್ದನು. ಮಗ ಅನಾರೋಗ್ಯ ತಪ್ಪಿದಾಗ ಗಂಡನ ಮನಸ್ಥಿತಿಯಿಂದ ಸಂಕಟಪಟ್ಟಳು. ರಾಯರು ಎರಡನೆ ಮದುವೆಯಾಗುವಾಗ ಸುದ್ದಿಯನ್ನು ರಾಜರಾಯನಿಂದ ತಿಳಿದು ದುಃಖಿಸಿದಳು. ಮೊದಲು ಸಾಧ್ಯವಿಲ್ಲವೆಂದು ಹೇಳಿದರು ಮೌನವಾಗಿಯೇ ಸಹಿಸಿಕೊಂಡಳು. ಕಾತ್ಯಾಯಿನಿ ಜೊತೆಗೆ ಭಾಂದವ್ಯ ಆಕೆಯ ರಾಜರಾಯ ಮದುವೆ ಮಾಡಿಕೊಳ್ಳುತ್ತೇನೆಂದು ಒಪ್ಪಿಗೆ ಸೂಚಿಸುವ ಅವಳು ಗಂಡನ ವಿಚಾರದಲ್ಲಿ ವಿರೋಧ ವ್ಯಕ್ತಪಡಿಸಿದಳು. ಸದಾಶಿವರಾಯ-ಕರುಣಾರತ್ನೆಯನ್ನು ಮದುವೆಯಾದರು, ಮನೆಗೆ ಬಂದು ಮಲಗುತ್ತಿದ್ದರು. ರಾಜರಾಯನಿಗೆ ಮದುವೆಯಾಗಿ ಬೆಂಗಳೂರಿಗೆ ವರ್ಗಾವಣೆಯಾದಾಗ ಅವರ ಜೊತೆಯಲ್ಲಿ ಅಲ್ಲಿಗೆ ಹೋದಳು. ಸದಾಶಿವರಾಯರಿಗೆ ಆರೋಗ್ಯ ಸರಿಲ್ಲದ ಕಾರಣ ಆಸ್ಪತ್ರೆಗೆ ಸೇರಿರುವ ಸುದ್ದಿ ತಿಳಿದು ರಾಯರ ಸ್ಥಿತಿ ಗಂಭೀರವಾಗಿರುವುದರಿಂದ ರಾಜರಾಯ ನಾಗಲಕ್ಷ್ಮಿ ಎಲ್ಲರು ಟ್ಯಾಕ್ಸಿಯಲ್ಲಿ ಮೈಸೂರಿಗೆ ಬಂದರು. ಮರುದಿನ ರಾಯರಿಗೆ ಸ್ವಲ್ಪ ಪ್ರಜ್ಞೆ ಬಂತು. ರಾಯರು ಸ್ವಲ್ಪ ಗುಣಮುಖರಾದಮೇಲೆ ಭಾರವಾದ ಧ್ವನಿಯಲ್ಲಿ "ಈ ಸಮಯದಲ್ಲಾದರು ನೀನು ಬಂದೆಯಲ್ಲಾ ಎಂದರು ನಾಗಲಕ್ಷ್ಮಿ ನಿಮ್ಮ ಜೊತೆ ಜಗಳವಾಡಿದ್ದನೆಯೆ? ಏನೋ ನಮ್ಮ ನಮ್ಮ ಗ್ರಹಚಾರ ಹೇಗೊ ಹಾಗೆ ಋಣಾನುಬಂದ ಸುಳ್ಳಾಗುತ್ತದೆಯೇ" ಎಂದು ಹೇಳುವಾಗ ಅವಳ ಧ್ವನಿ ದುಗುಡದಿಂದ ಮಿಡಿಯಿತು. ರಾಜ-ಕಾತ್ಯಾಯಿನಿಯ ನನ್ನನ್ನು ಚೆನ್ನಾಗಿ ನೋಡಿಕೊಂಡರು. ಆದರೆ ನಿಮ್ಮ ಜೊತೆ ಇದ್ದ ಹಾಗೆ ಆಗುತ್ತಾ, ಎಲ್ಲಾ ಋಣಾನುಬಂದ ಅಂದುಕೊಂಡು ಈಗಲೂ ನಾನೊಂದು ಮಾತು ಹೇಳುತ್ತೇನೆ? ಕೇಳ್ತಿರಾ ಎಂದು ಈಗಲು ನಾನು ನಿಮ್ಮ ಜೊತೆ ಬರ್ತೀನಿ, ಅವಳು ಇರಲಿ ಇಷ್ಟು ದಿನ ಆದ ಮೇಲೆ ನೀವು ಹೇಗಿದ್ದರೂ ನಂಗೆ ಬೇಜಾರಿಲ್ಲ ನಾನೆ ನಿಮ್ಮಿಬ್ಬರಿಗು ಅಡಿಗೆ ಮಾಡಿ ಹಾಕುತ್ತೇನೆ. ನಿಮಗೆ ವಾರಕ್ಕೊಂದು ಚೊಂಬು ನೀರು ಹಾಕ್ತೀನಿ ಒಪ್ಪಕೊಳ್ಳುತ್ತೀರ? ಎಂದು ಹೇಳುವಾಗ ಅವಳ ಮನಸ್ಸಿನಲ್ಲಿ ದುಃಖ ಹುಕ್ಕಿ ಬಂದಿತ್ತು. ರಾಯರು ಅಂತಃಕರಣದಿಂದ ಅವಳ ಕೈ ಹಿಡಿದು ಹೇಳಿದರು. ಹಾಗೆ ಮಾಡು ನನ್ನ ತಪ್ಪಿದ್ದರೆ ಕ್ಷಮಿಸಿಬಿಡು. ನೀನು ಪೃಥ್ವಿ ಇಲ್ಲೆ ಇರಿ ಎಂದು ಸಾಂತ್ವಾನ ಮಾಡಿದರು. ಹೀಗೆ ಗಂಡನ ಆರೋಗ್ಯದ ಕಾಳಜಿ, ಮಗನ ಭವಿಷ್ಯದ ಚಿಂತನೆ ಹಾಗೂ ಕರುಣಾರತ್ನೆಯನ್ನು ಒಪ್ಪಿಕೊಳ್ಳುವ ಮನೋಭಾವ ಎಲ್ಲವು ನಾಗಲಕ್ಷ್ಮಿಯ ದುಃಖವನ್ನು ನಿವಾರಿಸಿ ಆಕೆಯಲ್ಲಿನ ಉದಾರ ಮನಸ್ಥಿತಿ ಸಾಕ್ಷಿಯಾದ ಅಂಶವಾಗಿವೆ. ಕಾದಂಬರಿಯಲ್ಲಿ ಬರುವ ಚಿಕ್ಕಪಾತ್ರವಾದರು ಮುಖ್ಯ ಪಾತ್ರಗಳಲ್ಲಿ ನಾಗಲಕ್ಷ್ಮಿಯ ಪಾತ್ರ ಒಂದಾಗಿದೆ.

**ಲಕ್ಷ್ಮಿ**

ವಂಶವೃಕ್ಷ ಕಾದಂಬರಿಯಲ್ಲಿ ಬರುವ ಒಂದು ಚಿಕ್ಕ ವಿಶಿಷ್ಟ ಪಾತ್ರ ಲಕ್ಷ್ಮಿದು. ಲಕ್ಷ್ಮಿಯ ತಂದೆ ಶ್ರೀನಿವಾಸ ಶ್ರೋತ್ರಿಯ ತಂದೆಯ ಬಳಿಯಲ್ಲಿ ಕೆಲಸದ ಆಳು ಮಾಚನನ ಮಗಳೇ ಲಕ್ಷ್ಮಿ. ಲಕ್ಷ್ಮಿ ಶ್ರೀನಿವಾಸಶ್ರೋತ್ರಿಯ ಚಿಕ್ಕವಯಸ್ಸಿನಿಂದಲೂ ಜೋತೆಯಲ್ಲೇ ಬೆಳೆದವರಾದ್ದರಿಂದ ಅವಳು ಅವನನ್ನ ಶೀನಪ್ಪ ಎಂದೇ ಕರೆಯುತ್ತಿದ್ದಳು. ಹನ್ನೆರಡು ವರ್ಷದವಳಿದ್ದಾಗ ಲಕ್ಷ್ಮಿಯ ರೂಪ ಎಂತವರನ್ನೊ ಆಕರ್ಷಿಸುತ್ತಿತ್ತು. ಶ್ರೀನಿವಾಸಶ್ರೋತ್ರಿಗೆ ಒಮ್ಮೊಮ್ಮೆ ಲಕ್ಷ್ಮಿ ತಾನೇ ಅವಳನ್ನು ಮದುವೆಯಾಗಿದ್ದರೆ ಎಂಬ

ಆಲೋಚನೆ ಬರುತ್ತಿದ್ದುದೂ ಉಂಟು ಲಕ್ಷ್ಮಿಯು ಮದುವೆಯಾದ ಕೆಲವೇ ದಿನಗಳಲ್ಲಿ ಅವಳ ಗಂಡನು ಕೊಲೆಯಾದ್ದರಿಂದ ಲಕ್ಷ್ಮಿ ಪುನಃ ಶೀನಪ್ಪನ ಮನೆಗೆ ಬಂದಿದ್ದಳು. ಭಾಗೀರತಮ್ಮನ ಮನೆಕೆಲಸದಲ್ಲಿ ಸಹಾಯ ಮಾಡಿಕೊಂಡು ಉಳಿದಳು.

ಭಾಗೀರತಮ್ಮ ಗಂಡನಿಗೆ ದೈಹಿಕ ಸುಖ ನೀಡಲು ಸಾದ್ಯವಿಲ್ಲವೆಂದು ತಿಳಿದು ತನ್ನ ಹತ್ತಿರವೇ ಮಲಗುತ್ತಿದ್ದ ಲಕ್ಷ್ಮಿಗೆ ಗಂಡನ ಜೊತೆ ನಡೆದುಕೊ ಅವರ ಆರೋಗ್ಯದ ಬಗ್ಗೆ ಕಾಳಜಿ ಹೊಂದಿದ್ದ ಅವಳಿಗೆ ಹೇಳಿದಳು. ಮೊದಲು ಒಪ್ಪದೆ ಇದ್ದ ಲಕ್ಷ್ಮಿ ಹದಿನೈದು ದಿನ ಮತ್ತೆ ಭಾಗೀರತಮ್ಮ ಒತ್ತಾಯ ಮಾಡಿದಾಗ ಕೊನೆಗೆ ಒಪ್ಪಿದರೆ ಆಗಲಿ ಎಂದು ಸಮ್ಮತಿ ಸೂಚಿಸಿದಳು. ಶ್ರೋತ್ರಿಯ ಬಗ್ಗೆ ಅವರ ವಂಶದ ಬಗ್ಗೆ ಅಪಾರವಾದ ಕಾಳಜಿ ಹೊಂದಿದ ಈಕೆ ಭಾಗೀರತಮ್ಮ ಸಾವಿನ ನಂತರವು ಅದೇ ಮನೆಯಲ್ಲಿ ಉಳಿದಳು ಚೀನಿಯ ಬೆಳವಣಿಗೆ, ಸೊಸೆ ಕಾತ್ಯಾಯಿನಿ ಓದುವ ವಿಚಾರವಾಗಿ ಭಾಗೀರಥಮ್ಮ ವಿರೋಧ ವ್ಯಕ್ತಪಡಿಸಿದಾಗ ಈಕೆಯು ದ್ವನಿಗೂಡಿಸಿದಳು ಅನಂತರ ಶ್ರೀನಿವಾಸಶ್ರೋತ್ರಿಗೆ ತಾನು ಯಾರೆಂಬ ತಮ್ಮ ವಂಶದ ಮೂಲವನ್ನು ತಿಳಿಸಿಕೊಡುವವಳು ಇವಳೆ. ಕಾದಂಬರಿಕಾರರು ಲಕ್ಷ್ಮಿಯ ಪಾತ್ರದ ಮೂಲಕ ಶ್ರೀನಿವಾಸ ಶ್ರೋತ್ರಿಯ ವಂಶ ಯಾವುದು ಎನ್ನುವುದನ್ನು ಹೇಳಿಸುವ ಕೆಲಸ ಮಾಡಿದ್ದಾರೆ. ಲಕ್ಷ್ಮಿಯ ಪಾತ್ರದ ಮೂಲಕ ಕಾದಂಬರಿಯ ಬೆಳವಣಿಗೆಯ ತಂತ್ರವನ್ನಾಗಿ ಮಾಡಿಕೊಂಡಿದ್ದಾಳೆ.

**ಚೀನಿ**

ಚೀನಿ ಶ್ರೀನಿವಾಸಶ್ರೋತ್ರಿಯ ಮಗ ನಂಜುಡಶ್ರೋತ್ರಿ–ಕ್ಯಾತಾಯಿನಿಯರ ಮಗ. ಕಾದಂಬರಿಯಲ್ಲಿ ಬರುವ ಚಿಕ್ಕಪಾತ್ರ. ಚೀನಿಗೆ ಆರು ತಿಂಗಳು ಇರುವಾಗ ತಂದೆ ನಂಜುಡಶ್ರೋತ್ರಿ ಕಪಿಲ ನದಿಯ ಪ್ರವಾಹ ಸುಳಿಗೆ ಸಿಲುಕಿ ಸಾವನ್ನಪ್ಪಿದನು. ಮಗನ ಸಾವಿನಿಂದ ದುಃಖಿತರಾದ ತಂದೆ ತಾಯಿಯರಿಗೆ ಚೀನಿ ಸ್ವಲ್ಪ ಮಟ್ಟಿನ ಆನಂದವನ್ನು ನೀಡಿದನು. ಮಗ ಸತ್ತರು ವಂಶೋದ್ದಾರಕ ಇದ್ದಾನೆಂಬ ಭಾವದಿಂದ ಮಗನಿಗಿಂತಲೂ ಬಹಳ ಪ್ರೀತಿಯಿಂದ ಈತನನ್ನು ಸಾಕಿದರು. ಚೀನಿಯ ಬೆಳವಣಿಗೆಯ ಮೂಲಕ ಶ್ರೋತ್ರಿ ದಂಪತಿ–ತಾಯಿ ಕ್ಯಾತಾಯಿನಿ ಗಂಡನ ದುಃಖವನ್ನು ಮರೆತರು. ಕಾತ್ಯಾಯಿನಿ ರಾಜರಾಯರನ್ನು ಮದುವೆಯಾಗುವ ಹಿನ್ನೆಲೆಯಿಂದ ಮನೆಯಿಂದ ಹೊರಟಾಗ ಚೀನಿ ನಾನು ಬರುತ್ತೇನೆ ಅಮ್ಮ ಎಂದು ಅಳುವನ್ನು ವ್ಯಕ್ತಪಡಿಸಿದನು. ಆಕೆ ಅವಳನ್ನು ಬಿಟ್ಟು ಹೊರಟು ಹೋದಳು. ತಾಯಿ ಹೊರಟು ಹೋಗಿ ಬೇರೆ ಮದುವೆಯಾಗಿರುವ ವಿಚಾರ ಚೀನಿಗೆ ಗೊತ್ತಿತ್ತು. ತಾತ ಶ್ರೋತ್ರಿಯ ಮೊಮ್ಮಗನನ್ನು ಧರ್ಮ, ನಂಬಿಕೆ, ಸಂಪ್ರದಾಯದ ಪ್ರಕಾರವೇ ಬಹಳ ಶಿಸ್ತು ಬದ್ದವಾಗಿ ಬೆಳೆಸಿ ಉಪನಯನ ಕಾರ್ಯವಿಧಿಗಳನ್ನು ನೆರವೇರಿಸಿದನು. ಇಂಟರ್ ಮೀಡಿಯೇಟ್ ಪಾಸಾಗಿ ಕಾಲೇಜಿಗೆ ಸೇರಿಕೊಂಡಾಗ ಅಲ್ಲಿ ಕಾತ್ಯಯಿನಿ ಭೇಟಿಯಾಗಿ ಆಕೆಗೆ ಈತ ನನ್ನ ಮಗನೆಂದು ಗುರುತು ಸಿಕ್ಕಿ ಮಗನ ಪ್ರೀತಿಗಾಗಿ ಪರಿತಪ್ಪಿಸಿದಳು. ಅವನನ್ನು ಮನೆಗೆ ಕರೆದುಕೊಂಡು ಹೋಗಿ ತಾಯಿ ವಿಚಾರಗಳನ್ನು ಕೇಳಿ, ಆಕೆಯನ್ನು ನೋಡುವ ಆಸೆ ಇದಿಯಾ ಎಂದು ಕೇಳಿದಾಗ ಮೌನವಾಗಿದ್ದು ತನಗೆ ಇಷ್ಟವಿಲ್ಲವೆಂದು ಹೇಳಿ ಅಲ್ಲಿಂದ ಹೊರಟು

ಹೋದನು. ಕಾತ್ಯಾಯಿನಿಗೆ ಈ ಮಾತಿನಿಂದ ಮಾನಸಿಕ ಆಘಾತವಾಯಿತು. ಮತ್ತೆ ಚೇತರಿಸಿಕೊಂಡು ಕಾಲೇಜಿಗೆ ಒಂದು ವಾರದ ನಂತರ ಬಂದಾಗ ಚೀನಿ ಅಲ್ಲಿಂದ ವರ್ಗಾವಣೆ ಪತ್ರ ಪಡೆದು ಬೇರೆ ಕಾಲೇಜಿಗೆ ಸೇರಿಕೊಂಡ. ತಾಯಿ ಇದೇ ಕೊರಗಿನಲ್ಲಿ ಹಾಸಿಗೆ ಹಿಡಿದು ಸಾಯುವ ಸ್ಥಿತಿಗೆ ತಲುಪಿದಳು.

ತಾತ ಶ್ರೋತ್ರಿಯವರು ಲಕ್ಷ್ಮಿಯಿಂದ ತನ್ನ ಜನ್ಮದ ರಹಸ್ಯ ತಿಳಿದು ಮೊಮ್ಮಗನಾದ ಚೀನಿಗೆ ಎಲ್ಲವನ್ನು ತಿಳಿಸಿ ಆತನನ್ನು ಮದುವೆ ಮಾಡಿ ತಾನು .ಸನ್ಯಾಸ ಸ್ವೀಕರಿಸಿದನು. ಕೊನೆಗೆ ಕಾತ್ಯಾಯಿನಿಯನ್ನು ನೋಡಬೇಕೆಂಬ ಬಯಕೆಯಿಂದ ಮೈಸೂರಿಗೆ ಬಂದಾಗ ಆಕೆಯ ಆರೋಗ್ಯದ ಸ್ಥಿತಿ ತೀವ್ರವಾಗಿ ಹದಗೆಟ್ಟಿತ್ತು. ರಾಜರಾಯನು ಕಾತ್ಯಾಯಿನಿಯ ಆಸೆಯಂತೆ ತನ್ನ ಮಗ ಚೀನಿಯನ್ನು ಕರೆದುಕೊಂಡು ಬರುವಂತೆ ಪೃಥ್ವಿಗೆ ಹೇಳಿ ಕಳುಹಿಸಿ ಅಲ್ಲಿಗೆ ಬಂದ ಚೀನಿ. ತಾಯಿಯನ್ನು ಕುರಿತು ಮರುಗಿದನು. ತಾತನ ಮಾತಿನಂತೆ ಆಕೆಯ ಆಪಾರ ವಿಧಿಕರ್ಮಗಳನ್ನ ನೆರವೇರಿಸಿದನು. ಇದರೊಂದಿಗೆ ಕಾದಂಬರಿ ಮುಗಿಯುತ್ತದೆ. ಚೀನಿಯ ಪಾತ್ರವು ಕಾದಂಬರಿಯಲ್ಲಿ ಬರುವ ಚಿಕ್ಕಪಾತ್ರವಾದರು ತಾಯಿಯನ್ನು ನೋಡಿದಾಗ ಆಕೆಯ ಭಾವನೆಯ ಸ್ಥಿತಿ, ಸಂಸ್ಕಾರ ಮಾಡುವುದರ ಮೂಲಕ ವಿಶಿಷ್ಟಪಾತ್ರವಾಗಿ ಕಂಡುಬರುತ್ತದೆ.

**ಪೃಥ್ವಿ**

ಸದಾಶಿವರಾಯ-ನಾಗಲಕ್ಷ್ಮಿಯವರ ಮಗ. ಕಾದಂಬರಿಯಲ್ಲಿ ಬರುವಂತ ಅತ್ಯಂತ ಚಿಕ್ಕಪಾತ್ರ, ಚೀನಿಯ ಪಾತ್ರದಷ್ಟು ಮಹತ್ವಪೂರ್ಣವಾದ ಪಾತ್ರವಲ್ಲದಿದ್ದರೂ ಗಂಡ ಸದಾಶಿವರಾಯ ಕರುಣಾರತ್ನೆಯನ್ನು ಮದುವೆಯಾದಾಗ ತಾಯಿಯ ನೋವನ್ನು ಕಡಿಮೆಮಾಡುವಂತೆ ಪಾತ್ರವಾಗಿ ಬರುತ್ತದೆ ಚಿಕ್ಕಪ್ಪನೊಂದಗಿನ ಸಲುಗೆ, ಕಾತ್ಯಾಯಿನಿ ಮಗ ಚೀನಿ ತಿರಸ್ಕರಿಸಿ ಹೋದಾಗ ಆಕೆಗೂ ಸ್ವಲ್ಪಮಟ್ಟಿನ ಸಮಾಧಾನವನ್ನು ನೀಡಿದ ಪಾತ್ರವಾಗುತ್ತದೆ. ಆಕೆ ಆತನಿಗೆ ಸ್ನಾನ ಮಾಡಿಸಿ ತಲೆ ಬಾಚುವುದು, ಪ್ರೀತಿಯಿಂದ ನೋಡಿಕೊಳ್ಳುವುದು ತನ್ನ ಮಗನಲ್ಲಿಟ್ಟ ಪ್ರೀತಿಯನ್ನು ಈತನ ಮೂಲಕ ಸ್ವಲ್ಪ ಮಟ್ಟಿಗಾದರು ಕಂಡುಕೊಳ್ಳುವ ಪ್ರಯತ್ನಮಾಡುತ್ತಾಳೆ. ಚೀನಿಯ ಪಾತ್ರದಷ್ಟು ಮುಖ್ಯವಾಗದಿದ್ದರು ಕಾದಂಬರಿಯಲ್ಲಿ ಬರುವಂತೆ ಇತರ ಪಾತ್ರಗಳಂತೆ ಕಂಡು ಬಂದು ಕಾದಂಬರಿಯ ಬೆಳವಣಿಗೆ ಕಾರಣವಾಗಿದೆ.

ಅಧ್ಯಾಯ –4

# ಶೈಲಿ

ಸಂಸ್ಕಾರ – ವಂಶವೃಕ್ಷ ಕಾದಂಬರಿಗಳನ್ನು ರಚಿಸಿರು ಲೇಖಕರಿಬ್ಬರು ನವ್ಯ ಸಾಹಿತ್ಯದ ತಂತ್ರ ಮತ್ತು ಭಾಷೆಯನ್ನು ಬಳಸಿಕೊಂಡಿದ್ದಾರೆ. ನವ್ಯ ಸಾಹಿತ್ಯದ ಮೂಲ ಪ್ರವೃತ್ತಿಗಳ ಸಮರ್ಥ ಆವಿಷ್ಕಾರ ಈ ಕಾದಂಬರಿಗಳಲ್ಲಿದೆ. ಮಾನವನ ದ್ವಂದ್ವತೆ, ಘರ್ಷಣೆ, ಧೈರ್ಯ, ವೈಚಾರಿಕತೆ, ಪ್ರಾಮಾಣಿಕತೆ, ಪ್ರಗತಿಪರ ಚಿಂತನೆಗಳು ವ್ಯಕ್ತವಾಗಿವೆ. ಬ್ರಾಹ್ಮಣ ವರ್ಗದ ನಂಬಿಕೆ, ಆಚರಣೆ, ಸಂಪ್ರದಾಯಗಳ ಚಿತ್ರಣ ಎರಡೂ ಕಾದಂಬರಿಗಳಲ್ಲಿ ವ್ಯಕ್ತವಾಗಿದೆ. ಹಳೆಯ ಸಂಪ್ರದಾಯಗಳ ಚಿತ್ರಣ ಎರಡೂ ಕಾದಂಬರಿಗಳಲ್ಲಿ ವ್ಯಕ್ತವಾಗಿದೆ. ಹಳೆಯ ಸಂಪ್ರದಾಯಗಳನ್ನು ಒರಗೆ ಹಚ್ಚಿನೋಡಿ ಸತ್ವಹೀನವಾದವುಗಳ ಒಗೆದು ದ್ವಂದ್ವತೆಗೆ ಘರ್ಷಣೆಗೆ ಅಳುಕದೆ ಧೈರ್ಯದಿಂದ ಪ್ರಾಮಾಣಿಕತೆಯಿಂದ ಹೊಸ ಮೌಲ್ಯಗಳನ್ನು ಅನ್ವೇಷಿಸುವ ಪ್ರವೃತ್ತಿಯನ್ನು ಪ್ರಾಣೇಶಾಚಾರ್ಯರ ಪಾತ್ರದ ಮೂಲಕ ನೋಡಬಹುದು. ಸಂಸ್ಕಾರದಲ್ಲಿ ನಾರಣಪ್ಪನ ಸಾವಿನ ಸುದ್ದಿಯೊಂದಿಗೆ ಕಾದಂಬರಿ ಆರಂಭವಾಗುತ್ತದೆ. ಅದರ ಮೂಲಕವೇ ಇಡೀ ಅಗ್ರಹಾರದ ಬ್ರಾಹ್ಮಣರ ಧಾರ್ಮಿಕ ದ್ವಂದ್ವ ನಿಲುವುಗಳ ಚರ್ಚೆ ನಡೆಯುವುದನ್ನು ಕಾಣಬಹುದು. ನಾರಣಪ್ಪನ ಶವ–ಸಂಸ್ಕಾರವಾಗದ ಹೊರತು ಯಾರು ಊಟ ಮಾಡುವಾಗಿಲ್ಲ. ಅವನಿಗೆ ಮಕ್ಕಳಲ್ಲಿ ಯಾವ ಸಂಸ್ಕಾರ ಕಾರ್ಯ ನಡೆಸಬೇಕೆಂಬ ಚರ್ಚೆಯೇ ಕಾದಂಬರಿಯಲ್ಲಿನ ಮುಖ್ಯ ಪ್ರಶ್ನೆಯಾಗಿದೆ. "ನಾರಣಪ್ಪನು ಬ್ರಾಹ್ಮಣ ಸಂಪ್ರದಾಯ, ಆಚರಣೆಗಳನ್ನು ಬಿಟ್ಟು ಮಾನವ ಸಹಜವಾದ ಪ್ರವೃತ್ತಿಗೆ ಮುಂದಾಗಿ ಪ್ರಗತಿಪರವಾಗಿ ಚಿಂತಿಸುವುದು ಬ್ರಾಹ್ಮಣರಿಗೆಲ್ಲ ಅದು ಬೇರೆಯಾಗಿಯೇ ಕಂಡುಬರುತ್ತದೆ. ಇವನೊಬ್ಬ ಧರ್ಮಬಾಹಿರ, ಕೆಳವರ್ಗದ ಹೆಣ್ಣನ್ನು ಸಹವಾಸ ಮಾಡದವ ಎಂಬೆಲ್ಲ ಟೀಕೆಗೆ ಗುರಿಯಾದರೂ ಯಾರಿಗೂ ಎದುರುವ ವ್ಯಕ್ತಿಯಲ್ಲ. ಅಗ್ರಹಾರದ ಒಬ್ಬ ನರಪಿಳ್ಳೆಗೂ ನಾರಣಪ್ಪನ ಸಾವಿನಿಂದ ವ್ಯಥೆಯಾಗದಿದ್ದರೂ ಎಲ್ಲರ ಹೃದಯದಲ್ಲಿ ಒಂದು ರೀತಿಯ ಅಪರಿಚಿತ ಭೀತಿ, ಕಳವಳ ಹುಟ್ಟಿತ್ತು. "ಬದುಕಿನಲ್ಲಿ ವೈರಿ, ಸತ್ತು ಅನ್ನಕಂಟಕ, ಶವವಾಗಿ ಇನ್ನೂ ಸಮಸ್ಯೆ" ಎಂಬು ಮಾತು ಬ್ರಾಹ್ಮಣರ ನಂಬಿಕೆಗೆ ಪೂರಕವಾದ ಮಾತಾಗಿದೆ. ನಾರಣಪ್ಪನ ಸಂಸ್ಕಾರದ ವಿಚಾರವಾಗಿ ಉಂಟಾದ ಚರ್ಚೆಯ ಜಾತಿಗೆಟ್ಟ ನಾರಣಪ್ಪನ ಶವ ಧರ್ಮವಿಧಿಗೆ ಅರ್ಹವೇ ಎಂಬ ಪ್ರಶ್ನೆ ಏಳುತ್ತದೆ. ಆ ಸಮಸ್ಯೆಯ ಪರಿಹಾರಕ್ಕಾಗಿ, ಅಗ್ರಹಾರದ ಬ್ರಾಹ್ಮಣರು, ವಿದ್ವಾಂಸರೆನಿಸಿಕೊಂಡ ಪ್ರಾಣೇಶಾಚಾರ್ಯರಿಗೆ ಆ ಸಮಸ್ಯೆಯನ್ನು ತೀರ್ಮಾನಿಸುವ ಹೊಣೆಯ ಹೊರೆಯನ್ನು ಹೊರಸಿರುತ್ತಾರೆ. ಆದರೆ ಕಾದಂಬರಿ ಬಿಚ್ಚಿ ಹರಸಿಕೊಳ್ಳುತ್ತಿದ್ದಂತೆ 'ಸಂಸ್ಕಾರ' ಎಂಬ ಪದ ಪರಿಶುದ್ಧತೆ, ಪರಿಪಕ್ವತೆ ಎಂಬ ಅರ್ಥ ತಾಳುವುದನ್ನು ನಾನು ಗಮನಿಸಬಹುದು. ಹಾಗಾಗಿ ಸಂಸ್ಕಾರ ಎಂಬ ಶೀರ್ಷಿಕೆಯ ಒಂದು ಚಮತ್ಕಾರ ಪ್ರಯೋಗವಾಗಿದೆ. ಈ ರೀತಿ ಅಪರಕರ್ಮದಿಂದ ಉದ್ಭವಿಸಿರುವ ಸಮಸ್ಯೆಗೆ ಹೇಗೆ ಪ್ರಾಣೇಶಾಚಾರ್ಯರು ಜೀವನ ಪರಿಪಕ್ವವಾಯ್ತು ಎಂಬುದನ್ನು ಕಾಣಬಹುದು. ಕಾದಂಬರಿ, ನಾರಣಪ್ಪನ ಶವ ಸಂಸ್ಕಾರದಿಂದ

ಪ್ರಾರಂಭವಾಗಿ ಅದು ಕೊನೆ ಮುಟ್ಟುವುದು ಪ್ರಾಣೇಶಾಚಾರ್ಯರ ಆತ್ಮ ಸಾಕ್ಷಾತ್ಕಾರದೊಂದಿಗೆ ಅದರ ಮಧ್ಯ ಅವರು ತನ್ನನ್ನೇ ತಾನು ಅರಿತುಕೊಳ್ಳಲು ಸತತ ಪ್ರಯತ್ನ ಮಾಡುತ್ತಿದ್ದ ಅಂತ್ಯದಲ್ಲಿ ಸಾಕಷ್ಟು ಯಶಸ್ಸುಗಳಿಸುವುದನ್ನು ಕಾಣಬಹುದು. ಅವರಲ್ಲಿ ಉದ್ಭವಿಸುವ ದ್ವಂದ್ವ ಮತ್ತು ಅದರಿಂದ ಮಾಡಿದ ಸಂಘರ್ಷಗಳು ಅವರ ಜೀವನವನ್ನೇ ಬದಲಾಯಿಸುತ್ತದೆ. ಅಗ್ರಹಾರದ ಬ್ರಾಹ್ಮಣ ಸಮಾಜ ನಿರ್ಮಿಸಿದ್ದ ಗೊಡ್ಡು ಸಂಪ್ರದಾಯಗಳೆಂಬ ಕೋಣೆಯೊಳಗೆ ಬಂಧಿಯಾಗಿದ್ದು, ಅಲ್ಲಿಂದ ಹೊರಬಿದ್ದಾಗಲೇ ಅವರಿಗೆ ಅದರಿಂದ ಶಮನ ದೊರಕುತ್ತದೆ. ಧರ್ಮ, ಶಾಸ್ತ್ರ, ಸಂಪ್ರದಾಯ, ನಂಬಿಕೆಗಳು, ನಿಯಮಗಳೆಂಬ ಸಂಕೋಲೆಗಳಿಂದ ಬಿಗಿಯಲ್ಪಟ್ಟು ಪ್ರಾಣೇಶಚಾರ್ಯರಿಗೆ ಅಗ್ರಹಾರ ಸಮಾಜ ಬಿಟ್ಟು ಹೊರಗಿನ ಸಮಾಜದ ಅರಿವು ಕಡಿಮೆಯಾಗಿರುವುದು ಕಂಡುಬರುತ್ತದೆ. ನಾರಣಪ್ಪ, ಅಗ್ರಹಾರದ ಸಂಪ್ರದಾಯಗಳನ್ನು ಪ್ರತಿಭಟಿಸುವುದರ ಮೂಲಕ ಒಬ್ಬ 'ಬಂಡಾಯಗಾರ' ತನ್ನ ಬಂಡಾಯ ವರ್ತನೆಯನ್ನು ಆಧುನಿಕ ಎಂದೇ ಅವನು ನಂಬಿದಂತಿತ್ತು. ಆದರೆ ಅದೇ ಅಸಂಸ್ಕೃತನ ಕಾರಣದಿಂದಾಗಿ ಮೂಡಿದ ಸಮಸ್ಯೆ, ವಿದ್ವಾಂಸರೆನಿಸಿಕೊಂಡಿದ್ದ 'ಸುಸಂಸ್ಕೃತ' ಪ್ರಾಣೇಶಾಚಾರ್ಯರ ಜೀವನದ 'ಸಂಸ್ಕಾರ'ವಾಗುವುದು ಈ ಕಾದಂಬರಿ ಸಾರುವ ಪ್ರಧಾನ ಸಂದೇಶವಾಗಿದೆ. ಪಾರಿಜಾತಪುರದ ಬ್ರಾಹ್ಮಣರೆಲ್ಲಾ ಹೊರಟು ಹೋದ ಮೇಲೆ ಕರುಣೆಯಿಂದ ಪ್ರಾಣೇಶಾಚಾರ್ಯರು ಚಂದ್ರಿಯನ್ನು ಕುಳಿತುಕೋ ಎಂದು ಹೇಳಿ ತನ್ನ ಹೆಂಡತಿ ಮಲಗಿದ್ದ ಊಟದ ಮನೆಗೆ ಹೋದರು. 'ಇವಳೇ ಚಂದ್ರಿಯದು ತುಂಬಾ ನಿಷ್ಕಲ್ಮಷ ಹೃದಯಕಣೆ, ಎಂದು ಅವಳು ಬಂಗಾರವನ್ನು ಕೊಟ್ಟಿದ್ದು, ಅದರಿಂದ ಉದ್ಭವಿಸಿದ ಹೊಸ ಸಮಸ್ಯೆಯನ್ನು ವಿವರಿಸಿ ತಾಳೇಗರಿ ಗ್ರಂಥಗಳನ್ನೆಲ್ಲ ಬಿಚ್ಚಿ ಧರ್ಮಶಾಸ್ತ್ರವೇನೆನ್ನುತ್ತದೆಂದು ಹುಡುಕುತ್ತಾ ಕೂತರು. ಯಾವತ್ತಿನಿಂದಲೂ ಈ ನಾರಣಪ್ಪ ತನಗೆ ಸಮಸ್ಯೆಯಾಗಿಯೇ ಉಳಿದ ಅಗ್ರಹಾರದಲ್ಲಿ ಕೊನೆಗೆ ಗೆಲ್ಲುವುದು ಸನಾತನ ಧರ್ಮವನ್ನು ಹಿಡಿದ ತನ್ನ ತಪಸ್ಸೋ, ಅಥವಾ ಅವನ ರಾಕ್ಷಸ ಸ್ವಭಾವವೋ ಎಂದು ಅವರ ಹಟ. ಯಾವ ಶನಿಕಾಟದಿಂದ ಅವನು ಹೀಗಾದನೋ ಎಂದು ನೊಂದು, ದೇವರ ದಯದಿಂದ ಅವನು ಉದ್ಧಾರವಾಗಲಿ ಎಂದು ಪ್ರಾಣೇಶಾಚಾರ್ಯರು ವಾರದಲ್ಲಿ ಎರಡು ದಿನ ರಾತ್ರಿ ಊಟ, ಬಿಟ್ಟು ಒಪ್ಪತ್ತು ಮಾಡುತ್ತಿದ್ದರು. ಅಲ್ಲದೇ ಅವನ ಬಗ್ಗೆ ಅವರ ಹೃದಯದಲ್ಲಷ್ಟು ಪಶ್ಚಾತ್ತಾಪ ಕಳವಳ ಇರೋಕ್ಕೆ ಕಾರಣ ಅವನ ತಾಯಿಗೆ ತಾನು ಕೊಟ್ಟ ವಚನ. " ನಿನ್ನ ಮಗನ ಹಿತವನ್ನು ಕಾಯುತ್ತೇನೆ, ಅವನನ್ನು ಒಳ್ಳೆಯ ಮಾರ್ಗಕ್ಕೆ ತರುತ್ತೇನೆ. ಹೀಗೆ ಸಾಯುವ ಮುದುಕಿಗೆ ಧೈರ್ಯ ಹೇಳಿದರು. ಆದರೆ ನಾರಣಪ್ಪ ದಾರಿಗೆ ಬರಲಿಲ್ಲ. ಬುದ್ಧಿವಾದ ಕಿವಿಗೆ ಹಾಕಿಕೊಳ್ಳಲಿಲ್ಲ. ತಾನು ವೇದ ಹೇಳಿ, ಮಂತ್ರಗಳನ್ನು ಬಾಯಿಪಾಠ ಮಾಡಿಸಿ ಬೆಳೆಸಿದ ಗರುಡನ ಮಗ ಶ್ಯಾಮ, ಲಕ್ಷ್ಮಣನ ಅಳಿಯ ಶ್ರೀಪತಿಯನ್ನು ತನ್ನ ವರ್ಚಸ್ಸಿನಿಂದ ಕಸಿದುಕೊಂಡ, ಶ್ಯಾಮನಿಗೆ ಮನೆಬಿಟ್ಟು ಓಡಿಸಿ ಮಿಲಿಟರಿ ಸೇರಲು ಪ್ರೇರೇಪಿಸಿದ. ಗರುಡ, ಲಕ್ಷ್ಮಣರು ತಂದ ದೂರುಗಳನ್ನು ಕೇಳಿ ಕೇಳಿ ಅವರು ಒಂದು ದಿನ ಅವನಲ್ಲಿಗೆ ಹೋಗಿದ್ದರು. ಸುಪ್ಪತ್ತಿಗೆಯ ಮೇಲೆ ಮಲಗಿದ್ದವ ತನ್ನನ್ನು ಕಂಡು ಎದ್ದು ಕೂರುವಷ್ಟು ಮರ್ಯಾದೆ ತೋರಿಸಿದ. ಆದರೆ ಈತ ಹೇಳಲು ಹೋದರೆ, ಯದ್ವಾತದ್ವ ಮಾತಾಡಿದೆ. ಬ್ರಾಹ್ಮಣ ಧರ್ಮವನ್ನು ಜರಿದ

"ಇನ್ನು ನಿಮ್ಮ ಶಾಸ್ತ್ರ ನಡೆಯೋದಿಲ್ಲ, ಮುಂದೆ ಬರೋದು ಕಾಂಗ್ರೆಸ್ಸು, ಪಂಚಮರನ್ನು ದೇವಸ್ಥಾನದೊಳಕ್ಕೆ ಬಿಡಬೇಕು. ಎಂದೆಲ್ಲ ಏನೇನೋ ಅಸಂಬದ್ಧ ಪ್ರಲಾಪಿಸಿದ. ಬೇಡವೋ ಎಂದೆ ಶ್ರೀಪತಿಯನ್ನು ಅವನ ಹೆಂಡತಿಯಿಂದ ದೂರ ಮಾಡಬೇಡವೋ ಎಂದೆ ಅಹಹಾ ಎಂದು ನಕ್ಕುಬಿಟ್ಟ, ಸುಖಕೊಡದ ಹುಡುಗಿಯ ಕೂಡ ಯಾರು ಯಾರು ತಾನೇ ಸಂಸಾರ ಮಾಡುತ್ತಾರೇ ಆಚಾರ್ಯರೇ ಗೊಡ್ಡು ಬ್ರಾಹ್ಮಣರನ್ನು ಬಿಟ್ಟರೆ ಎಂದು ಮೂದಲಿಸಿದ. ಸಂಬಂಧಾಂತ ನನಗೆ ಭ್ರಾಂತಿ ಹಿಡಿದ ಹುಡುಗಿನ್ನ ಕಟ್ಟಿ ಹಾಳುಮಾಡಬೇಕೂಂತ ಇದ್ದಿರಲ್ಲ ನೀವು ಬ್ರಾಹ್ಮಣರು ನಿಮ್ಮ ಧರ್ಮ ನಿಮಗೆ ಇರಲಿ, ಇರೋದು ಒಂದೇ ಆಯುಷ್ಯ. ನಾನು ಚಾರ್ವಾಕವಂಶದವ – ಋಣಂಕೃತ್ವಾಘೃತಂ ಪಿಬೇತ್" ಎಂದ. ಈ ಭೌತಶರೀರ ಶಾಶ್ವತದಲ್ಲಪ್ಪ ಎಂದು ಬೋಧಿಸಿದೆ, ಬೇಡಿದೆ. ನೀನು ಏನೇ ಮಾಡು, ಹುಡುಗರನ್ನಾದರೂ ಹಾಳು ಮಾಡಬೇಡ" ಎಂದು ಅಂಗಲಾಚಿದೆ. ಅದಕ್ಕೂ ನಕ್ಕು ಬಿಟ್ಟ. ಮುಂಡೆಯರ ಆಸ್ತಿಗೆ ಮುಟ್ಟುಗೋಲು ಹಾಕಿ, ಮಾಟಮಂತ್ರ ಮಾಡಿಸಿ, ಕೆಟ್ಟದ್ದು ಬಗೆಯುವ ಗರುಡ ನಿಮ್ಮ ಪ್ರಕಾರ ಬ್ರಾಹ್ಮಣನೋ? ಎಂದು ಗೇಲಿ ಮಾಡಿದ. 'ಕೊನೆಯಲ್ಲಿ ಗೆಲ್ಲೋದು ನಾನೋ, ನೀವೋ? ನೋಡುವ ಆಚಾರ್ಯರೇ, ಎಷ್ಟು ದಿನ ಈ ಬ್ರಾಹ್ಮಣ್ಯ ಉಳಿಯುತ್ತೇ ಅಂತ? ಈ ಬ್ರಾಹ್ಮಣ್ಯದ ಮಾರ್ಯದೇನೆಲ್ಲ ನಾನು ಬೇಕಾದರೆ ಒಂದು ಹೆಣ್ಣಿನ ಸುಖಕ್ಕೆ ಸುರಿದು ಹಾಕಿಬಿಡ್ತೇನೆ? ನೀವಿನ್ನು ಹೊರಡಿ: ಹೆಚ್ಚಿಗೆ ಮಾತಾಡಿ ನಿಮ್ಮನ್ನು ನೋಯಿಸೋಕೆ ಇಷ್ಟವಿಲ್ಲ ಎಂದು ಬಿಟಿದ್ದ.. ಇಂತಹ ಪ್ರಾಣಿಗೆ ಬಹಿಷ್ಕಾರ ಹಾಕಿಸೋಕೆ ನಾನು ಯಾಕೆ ಅಡ್ಡಬಂದೇ? ಭೀತಿಯಾ? ಪಶ್ಚಾತ್ತಾಪವೋ? ಕೊನೆಗೆ ನಾನೇ ಗೆಲ್ಲುವನೆಂಬ ಹಟವೋ? ಅಂತೂ ಅವನು ಅಂದ ಹಾಗೆ ಬದುಕಿದ್ದಾಗ ಹೇಗೋ ಹಾಗೆ ಈಗ ಸತ್ತು ನನ್ನ ಬ್ರಾಹ್ಮಣ್ಯದ ಸತ್ವಪರೀಕ್ಷೆ ಮಾಡುತ್ತಿದ್ದಾನೆ. ಇಲ್ಲಿ ಅನಂತಮೂರ್ತಿಯವರು ಬ್ರಾಹ್ಮಣ ವರ್ಗದ ಪೊಳ್ಳು ನಂಬಿಕೆಗಳನ್ನು ನಾರಾಣಪ್ಪನ ಪಾತ್ರದ ಮೂಲಕ ತಿಳಿಸಿದ್ದಾರೆ.

ಕೊನೆಯ ಸಾರಿ ನಾರಣಪ್ಪನನ್ನು ನೋಡಿದ್ದೆಂದರೆ ಮೂರು ತಿಂಗಳ ಹಿಂದೆ ಚತುರ್ದಶಿಯ ಒಂದು ಸಂಜೆ. ಅವತ್ತು ಬೆಳಿಗ್ಗೆ ಅವ ಮುಸಲ್ಮಾರನ್ನು ಕರೆದುಕೊಂಡು ಹೋಗಿ ಗಣಪತಿ ದೇವಸ್ಥಾನದ ಹೊಳೆಯ ದೇವರ ಮೀನನ್ನು ಹಿಡಿದು ಅಗ್ರಹಾರದಲ್ಲಿ ಎಲ್ಲರ ಕಣ್ಣೆದುರು ಎತ್ತಿಕೊಂಡು ಹೋದ ಎಂದು ಗರುಡಾಚಾರ್ಯ ದೂರು ತಂದಿದ್ದ. ಮೇಲಕ್ಕೆ ಬಂದು ಕೈಯಿಂದ ಅಕ್ಕಿಯನ್ನು ತಿಂದು, ಹೊಳೆಯಲಲಿ ನಿರಂಬಳ ಕ್ರೀಡಿಸುವ ಆ ಆಳೆತ್ತರದ ಮೀನುಗಳನ್ನು ಹಿಡಿದರೆ ರಕ್ತಕಾರಿ ಸಾಯುತ್ತಾರೆಂಬ ನಂಬಿಕೆಯನ್ನು ನಾರಣಪ್ಪ ನಿರ್ಲಕ್ಷಿಸಿದನೆಂದು ಪ್ರಾಣೇಶಾಚಾರ್ಯರಿಗೆ ಗಾಬರಿಯಾಯಿತು. ಇವ ಹೀಗೆ ತಪ್ಪಿಹೋಗದೆ ಇರುತ್ತದೋ! ದೈವ ಭಯದಿಂದಲಾದರೂ ಸಾಮಾನ್ಯರಲ್ಲಿ ಇಷ್ಟಾದರೂ ಧರ್ಮಬುದ್ಧಿ ಈ ಕಲಿಗಾಲದಲ್ಲಿ ಉಳಿದಿರೋದು. ಅದೂ ನಾಶವಾದರೇ ಈ ಭೂಮಿಯನ್ನು ಎತ್ತಿ ಹಿಡಿಯೋ ಶಕ್ತಿ ಇನ್ನೆಲ್ಲಿ ಉಳಿದಿರುತ್ತದೆ? ಈಗ ತಾನು ಸುಮ್ಮನಿರೋದು ಅತ್ಯಂತ ಅನುಚಿತವೆಂದು ದಡದಡನೆ ನಡೆದು ನಾರಣಪ್ಪನ ಮುಖಕ್ಕೆ ಮುಖ ಕೊಟ್ಟು ಅವನ ಪಡಶಾಲೆಯಲ್ಲಿ ನಿಂತರು.

'ಕುಡಿದಿದ್ದ ಎಂದು ಕಾಣುತ್ತದೆ. ಕಣ್ಣು ಕೆಂಪಾಗಿತ್ತು. ಕ್ರಾಮು ಕೆದರಿತ್ತು, ಆಗ ತನ್ನನ್ನು ಕಂಡೊಡನೆ ದಡ್ಡನೆದ್ದು ಬಟ್ಟೆಯಿಂದ ಬಾಯಿ ಮುಚ್ಚಿಕೊಂಡನಲ್ಲವೇ ಅವನ ಸ್ವಭಾವ ಚಕ್ರವ್ಯೂಹದಂತೆಂದು, ಅದರೊಳಗೆ ತನಗೆ ಹೋಗಲು ಪ್ರಾಯಶಃ ಎಡೆಯಿಲ್ಲವೆಂದು ಕೆಲವೊಮ್ಮೆ ಪರಿತಪಿಸುತ್ತಿದ್ದ ಆಚಾರ್ಯರಿಗೆ ಅವನ ಗರ್ವದ ರಾವಣತ್ವದಲ್ಲಿ ತನ್ನನ್ನು ಕಂಡು ಅಂಜುವಷ್ಟಾದರೂ ಬಿರುಕು ಬಿಟ್ಟಿದ್ದ ನೋಡಿ ಒಳಗಿನಿಂದ ಸಾತ್ವಿಕಶಕ್ತಿ ನುಗ್ಗಿದಂತಾಗಿ ಆಶೋದಯವಾಯಿತು. ಈಗ ಮಾತು ವ್ಯರ್ಥವೆಂದು ಅವರಿಗೆ ಗೊತ್ತು. ತನ್ನೊಳಗಿನ ಸಾತ್ವಿಕ ಗಂಗಾಜಲ ಅವನೊಳಕ್ಕೆ ಮೌನವಾಗಿ ನುಗ್ಗಿದ ಹೊರತು ಅವನು ಅರಳುವವನಲ್ಲವೆಂದು ಅವರಿಗೆ ಗೊತ್ತು. ಗರುಡನಂತೆರಗಿ ಅವನನ್ನು ಜರ್ಜರಗೊಳಿಸಿ ಒಳಗಿನ ಅಮೃತವನ್ನು ಪುಟಿಸಬೇಕೆಂದು ಕಾಮದಂತಹ ಆಸೆಯೆದ್ದಿತು. ಕಠೋರವಾಗಿ ನೋಡಿದರು. ಸಾಮಾನ್ಯಪಾಪಿ, ಅಂಜಿ, ಹೇಸಿ ಭೂಗತವಾಗಬೇಕು ಹಾಗೆ ನೋಡಿದರು. ಅವನ ಕಣ್ಣಿಂದ ಪಶ್ಚಾತ್ತಾಪದ ಎರಡು ಹನಿ ನೀರು ಬೀಳಲಿ ಸಾಕು. ತನಗಿಂತ ಐದು ವರ್ಷ ಕಿರಿಯವನಾದ ನಾರಣಪ್ಪನನ್ನು ಭ್ರಾತೃವಾತ್ಸಲ್ಯದಿಂದ ಹಿಡಿದಪ್ಪಿಬಿಡುತ್ತೇನೆಂದು ಕಾಮಿಸಿ ನೋಡಿದರು.

ನಾರಣಪ್ಪ ತಲೆ ತಗ್ಗಿಸಿದ. ಭರ್ರನೆ ಹಾರಿ ಕವಿದುಕೊಂಡ ಗರುಡನ ತೊಡೆಗೆ ಸಿಕ್ಕಿದವನಂತೆ, ಕ್ಷಣ ಹುಳುವಾದಂತೆ, ಮುಚ್ಚಿದ ಬಾಗಿಲೊಂದನ್ನ ತುಸು ತೆರೆದು ಇಣುಕಿ ತಬ್ಬಿಬ್ಬಾದ. ಹಾಗೆ ಕಂಡ.. ಇಲ್ಲ ಬಾಯಿಂದ ಬಟ್ಟೆಯನ್ನು ತೆಗೆದು, ಕುರ್ಚಿಯ ಮೇಲೆ ಬಿಸಾಕಿ ಗಹಗಹಸಿ ನಕ್ಕ. ಚಂದ್ರಿ, ಎಲ್ಲಿ ಬಾಟಲು? ಆಚಾರ್ಯಗಷ್ಟು ತೀರ್ಥಕೊಡು, ಇದರಿಂದ ಕೋಪಗೊಂಡ ಆಚಾರ್ಯರು ಬಾಯಿಮುಚ್ಚು ಎಂದು ಬೈದರು. "ಆಹಾ! ಆಚಾರ್ಯರಿಗೂ ಸಿಟ್ಟು ಬರುತ್ತದಲ್ಲವೇ? ಕಾಮಕ್ರೋಧಾದಿಗಳು ನಮ್ಮಂಥವರಿಗೆ ಮಾತ್ರ ಎಂದು ತಿಳಿದಿದ್ದೆ. ಕಾಮಾನ ತುಳಿದವನಿಗೆ ಕೋಪ ಮುಗಿನ ತುದೀಲೇ ಇರುತ್ತಂತೆ. ದೂರ್ವಾಸ, ಪರಾಶರ, ಭೃಗು, ಬೃಹಸ್ಪತಿ, ಕಾಶ್ಯಪೆ – ಚಂದ್ರಿ ಎಲ್ಲಿ ಬಾಟಲು? ಅಲ್ಲಿ ಅಚಾರ್ಯರೇ ನಿಮ್ಮ ಋಷಿಗಳು ಸೈ ಬೇಕಾದರೆ ಮೀನಿನ ವಾಸನೆಯುಳ್ಳವಳನ್ನು ದೋಣಿಯಲ್ಲೇ ಕೆಡಿಸಿ ಸುಗಂಧಿ ಮಾಡಿದವನ ಹೆಸರೇನು? ಅಂತಹ ಪರಂಪರೇಲಿ ಬಂದ ಈ ಅಗ್ರಹಾರದ ಬಡ ಬ್ರಾಹ್ಮಣರನ್ನ ನೋಡಪ್ಪ, ಕೊನೆಗೆ ಗೆಲ್ಲೊದು ನಾನೋ ನೀವೋ ನೋಡುವ ನಾನು ಬ್ರಾಹ್ಮಣ್ಯದ ನಾಶ ಮಾಡುತ್ತೇನೆ. ಮಾಡಿಯೇ ತೀರುತ್ತೇನೆ. ನನ್ನ ದುಃಖವೆಂದರೆ ನಾಶ ಮಾಡೊದಕ್ಕೆ ಈ ಅಗ್ರಹಾರದಲ್ಲಿ ಬ್ರಾಹ್ಮಣನೇ ಉಳಿದಿಲ್ಲಲ್ಲಾಂತ. ನಿಮ್ಮೊಬ್ಬರನ್ನು ಬಿಟ್ಟರೆ, ಗರುಡ, ಲಕ್ಷ್ಮಣ, ದುರ್ಗಾಭಟ್ಟ – ಅಹಹಾ ಎಂಥಾ ಬ್ರಾಹ್ಮಣರಯ್ಯ ನಾನೇನಾದರೂ ಬ್ರಾಹ್ಮಣನಾಗಿ ಉಳಿದಿದ್ದರೆ ನಿಮ್ಮ ಗರುಡಾಚಾರ್ಯ. ನನ್ನನ್ನು ಅಪೋಶನಾ ತಗೊಂಡುಬಿಡ್ತಿದ್ದ. ಅಥವಾ ಆಸ್ತಿ ಮೇಲಿನ ಆಸೆಗೆ ಹೇಲಿನಲ್ಲಿ ಬಿದ್ದಿರೋ ಕಾಸನ್ನ ನಾಲಗೇಂದ ನೆಕ್ಕಿ ತಗಿಯೋ ಆ ಲಕ್ಷಣ ತನ್ನ ಇನ್ನೊಂದು ನರಪೇತ ನಾದಿನಿಯನ್ನು ನನಗೆ ಕಟ್ಟಿರುತ್ತಿದ್ದ. ಒಟ್ಟಿನಲ್ಲಿ ಜುಟ್ಟು ಬಿಟ್ಟು, ಅಂಗಾರ ಹಾಕಿ ನಿಮ್ಮ ಕಟ್ಟೇ ಮೇಲೆ ಕೂತು, ನೀವು ಹೇಳೋ ಪುರಾಣವನ್ನು ಕೇಳಿಸಿಕೊಂಡು ಇರಬೇಕಾಗಿತ್ತು. ಎಂದು ನಾರಣಪ್ಪ ಇನ್ನೊಂದು ಗುಟುಕು ಕುಡಿದು ಪ್ರಾಣೇಶಾಚಾರ್ಯರಿಗೆ ನಾನೊಂದು ಪುರಾಣ ಹೇಳುತ್ತೇನೆ ಕೇಳಿ ಎಂದ.

ಒಂದು ಅಗ್ರಹಾರದಲ್ಲಿ ಒಬ್ಬ ಪರಮಪೂಜ್ಯ ಆಚಾರಿಯಿದ್ದ. ಒಂದಾನೊಂದು ಕಾಲದಲ್ಲಿ ಅವನ ಹೆಂಡತಿ ಸದಾ ರೋಗಿಯಾದ್ದರಿಂದ ಸ್ತ್ರೀ-ಸುಖವೇನೆಂದು ತಿಳಿಯದ ಅವನ ತೇಜಸ್ಸು – ಅಂದರೆ ಅವನ ಖ್ಯಾತಿ-ಊರೂರು ಹರಡಿತ್ತು. ಅಗ್ರಹಾರದಲ್ಲಿ ಉಳಿದ ಬ್ರಾಹ್ಮಣರು ಪರಮಪಾಪಿಗಳು. ಅನ್ನಮೂಲ, ಕಾಂಚನಮೂಲವಾದ ಸರ್ವಪಾಪಗಳನ್ನು ಮಾಡಿದರು. ಆದರೆ ತಮ್ಮ ಪಾಪಾನ್ನ ಹೇಗೋ ಆ ಆಚಾರಿ ಮಾಡುವ ಪುಣ್ಯ ಮುಚ್ಚಾತ್ತೆಲ್ಲಾಂತ ಅವರು ಇನ್ನೆಷ್ಟು ಪಾಪಾನ್ನ ಸಲೀಸಾಗಿ ಮಾಡತೊಡಗಿದರು. ಹೀಗೆ ಆಚಾರ್ಯರ ಪುಣ್ಯ ಏರಿದಷ್ಟೂ ಅವರ ಪಾಪನೂ ಏರಿತು. ಒಂದು ದಿನ ಒಂದು ತಮಾಷೆಯಾಯ್ತು. ಏನು ಆಚಾರ್ಯರೇ, ನಾವು ಮಾಡೋ ಕರ್ಮಕ್ಕೆಲ್ಲ ತದ್ರೂಪವಾದ ಫಲ ಹೇಗೋ ಹಾಗೆ ತದ್ವಿರುದ್ದವಾದ ಫಲಾನು ಪ್ರಾಪ್ತವಾಗುತ್ತದೆ ಎಂಬೋದು ನನ್ನ ಕತೆಯ ನೀತಿ ಕೇಳಿಸಿಕೊಂಡು ಉಳಿದ ಬ್ರಾಹ್ಮಣರಿಗೂ ಹೇಳಿ ಎಂದೆ.

ಈ ರೀತಿ ನಾರಣಪ್ಪನ ಮಾತುಗಳಲ್ಲಿ ಹಾಗೂ ಪ್ರಾಣೇಶಾಚಾರ್ಯರ ನಿಲುವುಗಳಲ್ಲಿ ನವ್ಯ ಸಾಹಿತ್ಯದ ಒಳಸೂಕ್ಷ್ಮತೆಗಳ ಅಂಶಗಳು ಬರುವಂತೆ ಕಾದಂಬರಿಕಾರರು ಚಿತ್ರಿಸಿದ್ದಾರೆ. ಸನಾತನ ಧರ್ಮದ ಗೊಡ್ಡು ಸಂಪ್ರದಾಯಗಳನ್ನು ನಾರಣಪ್ಪನ ಮಾತಿನ ಮೂಲಕ ಅಭಿವ್ಯಕ್ತವಾಗುವಂತೆ ಚಿತ್ರಿಸಿದ್ದಾರೆ. ಮಾನವ ಸಹಜ ಬಯಕೆಗಳು ವ್ಯಕ್ತಿಗತವಾಗಿ ಹೇಗೆ ಮನಸ್ಸಿನಲ್ಲಿರುತ್ತವೆ ಎಂಬಂತಹ ಅಂಶಗಳನ್ನು ನಾರಣಪ್ಪನ ಮಾತಿನಲ್ಲಿ ಕಂಡು ಬರುತ್ತವೆ. ಪ್ರಾಣೇಶಾಚಾರ್ಯರನ್ನು ಕಂಡು ಸ್ವಲ್ಪ ಮಟ್ಟಿನ ಭಯವನ್ನು ಹೊಂದಿದ್ದ ನಾರಣಪ್ಪ ಕುಡಿದು ಮಾತನಾಡುವ ಮೂಲಕ ಧರ್ಮದ ಒಳಸೂಕ್ಷ್ಮತೆಗಳನ್ನು ಹೊರಬರುವಂತೆ ನೋಡಿದ್ದಾರೆ. ಸನಾತನ ಧರ್ಮದ ಪ್ರತೀಕದಂತಿರುವ ಪ್ರಾಣೇಶಾಚಾರ್ಯರು ಸಹ ಚಂದ್ರಿಯ ಜೊತೆಗಿನ ದೈಹಿಕ ಸಂಬಂಧದಿಂದ ಎಂದೂ ಕಾಣದಂತಹ ಕಾಮದ ತೃಪ್ತಿಯನ್ನು ಅನುಭವಿಸಿ ಲೌಕಿಕ ಜಗತ್ತಿನ ಮಾನವನ ಮಾನಸಿಕ ಸ್ಥಿತಿಯನ್ನು ಅರ್ಥಪಡಿಸುವನಂತೆ ಕಾದಂಬರಿಕಾರರು ಚಿತ್ರಿಸಿದ್ದಾರೆ.

ಮಾನವನ ಸಹಜ ಬಯಕೆಗಳಲ್ಲಿ ಒಂದಾದ ದೈಹಿಕ ಸುಖ ನವ್ಯದ ಧೋರಣೆಯಲ್ಲಿ ಹೇಗೆ ಬರುತ್ತದೆ ಎಂಬುದನ್ನು ಪ್ರಾಣೇಶಾಚಾರ್ಯ-ಚಂದ್ರಿಯರ ಆಕಸ್ಮಿಕ ಸಮಾಗಮದ ಮೂಲಕ ಚಿತ್ರಿಸಿದ್ದಾರೆ. ಇಲ್ಲಿ ನವ್ಯ ಸಾಹಿತ್ಯದ ಭಾಷೆ, ತಂತ್ರಗಳು ವ್ಯಕ್ತವಾಗಿರುವುದನ್ನು ಕಾಣಬಹುದು.

ನಾರಣಪ್ಪನ ಶವಸಂಸ್ಕಾರದ ವಿಚಾರವಾಗಿ ಧರ್ಮಗ್ರಂಥಗಳು, ಪುರಾಣಗಳಲ್ಲಿ ಪರಿಹಾರ ದೊರೆಯದೆ ಗುಡಿಯ ಮಾರುತಿ ದೇವರ ಪ್ರಸಾದಕ್ಕಾಗಿ ಕಾಯುತ್ತ ಕೂತ ಪ್ರಾಣೇಶಚಾರ್ಯರು. ಕೂಡದು ಎಂದು ನಿನ್ನ ಮತವಾದರೆ ಎಡ ಪ್ರಸಾದವನ್ನಾದರೂ ದಯಮಾಡು ಎಂದು ದೇವರನ್ನು ಒಲಿಸುವ ಪ್ರೇಮಭಾವದ ಕೀರ್ತನೆಗಳನ್ನು ಹಾಡಿದರು. ಧರ್ಮಶಾಸ್ತ್ರದಲ್ಲಿ ನನಗೆ ಉತ್ತರ ಸಿಗಲಿಲ್ಲ. ನಿನ್ನಿಂದಲೂ ಸಿಗಲಿಲ್ಲ. ನಾನು ಆ ಪಾತ್ರನೇನು ಹಾಗಾದರೇ? ಎಂದು ಸಂಶಯಪಟ್ಟು, ಅವಮಾನಿತರಾದರು. ನನ್ನನ್ನೇ ಪರೀಕ್ಷೆಸುತ್ತಿದ್ದಿಯಲ್ಲ" ಎಂದು ಮಾರುತಿಯನ್ನು ಬಯ್ದರು. ಕೊನೆಯವರೆಗೂ ಕಾದು ಹೆಂಡತಿಗೆ ಮದ್ದು ಕೊಡುವುದು ತಕ್ಷಣ ನೆನಪಾಯಿತು. ನಿರಾಶೆಯಿಂದ ಎದ್ದು ನಿಂತರು. ಕಾಲು ಕೂತು ಮರಗಟ್ಟಿತ್ತು. ಕ್ಷೀಣರಾಗಿ ಮೆಲ್ಲಮೆಲ್ಲನೆ ನಡೆದರು. ಸ್ವಲ್ಪ ದೂರ ನಡೆದ ಮೇಲೆ ದಟ್ಟವಾದ ಕತ್ತಲಿನ ಕಾಡಿನಲ್ಲಿ

ಹಿಂದಿನಿಂದ ಹೆಜ್ಜೆ ಸಪ್ಪಳದಂತಾಗಿ ನಿಂತರು. ಕೈಬಳೆಯ ಶಬ್ದ ಆಲಿಸಿದರು. ಯಾರು? ಎಂದರು. ಕಾದರು. "ನಾನು ಎಂದಳು ಸಂಕೋಚದಿಂದ ಸಣ್ಣದಾಗಿ ಚಂದ್ರಿ, ಪ್ರಾಣೇಶಾಚಾರ್ಯರಿಗೆ ಒಮ್ಮೆಲೆ ಕಾಡುಕತ್ತಲಿನಲ್ಲಿ ಹೀಗೆ ಹೆಣ್ಣೊಬ್ಬಳು ಬಳಿ ನಿಂತಿರುವುದು ಒಂದು ತರಹವಾಯಿತು. ಏನಾದರೂ ಅನ್ನಬೇಕೆಂದು ಮಾತು ಹುಡುಕಿ ತನ್ನ ಪಾಡು ನೆನೆದು ದುಃಖವಾಗಿ ಮಾರುತಿ, ಮಾರುತಿ.. ಎನ್ನುತ ನಿಂತರು.

ಚಂದ್ರಿಗೆ ಅವರ ಮೃದುವಾದ, ಗದ್ಗದಿತವಾದ ಧ್ವನಿ ಕೇಳಿ ತುಂಬಾ ಮರುಕ ಉಕ್ಕಿತು. ಪಾಪ ಹಸಿದು ಕಂಗೆಟ್ಟು ತನಗಾಗಿ ಒದ್ದಾಡಿ ಬಡವನಾಗಿದ್ದಾನೆ ಬ್ರಾಹ್ಮಣ. ಅವರ ಕಾಲನ್ನು ಭದ್ರವಾಗಿ ಹಿಡಿದು ನಮಸ್ಕಾರ ಮಾಡಬೇಕೆನಿಸಿತು. ಮರುಕ್ಷಣವೇ ಮುಂದೆ ಬಂದು ಬಿದ್ದಳು. ಕತ್ತಲೆಯಲ್ಲಿ ಕಣ್ಣು ಕಾಣಿಸದ್ದರಿಂದ, ಉಮ್ಮಳದಲ್ಲೆಂಬಂತೆ ಅವಳು ಬಾಗಿದ್ದರಿಂದ, ಪಾದದ ಬದಲು ಅವರ ಮೊಣಕಾಲು ಅವಳ ಎದೆಗೆ ತಾಕಿತು. ಮುಗ್ಗರಿಸಿದ ವೇಗಕ್ಕೆ ಕುಪ್ಪಸದ ಗುಂಡಿಗಳು ಹರಿದವು. ಅವಾಕ್ಕಗಿ ಅವರ ತೊಡೆಯ ಮೇಲೆ ತಲೆಯಿಟ್ಟು ಕಾಲುಗಳನ್ನು ತಬ್ಬಿಕೊಂಡಳು. ಉಕ್ಕಿಬಂದ ಭಕ್ತಿ, ಹೆಣ್ಣಿನ ಸುಖವನ್ನೇ ಕಾಣದ ಬ್ರಾಹ್ಮಣ ಎನ್ನುವ ಮರುಕ, ಈ ಅಗ್ರಹಾರದಲ್ಲಿ ನೀವಲ್ಲದೆ ನನ್ನ ಹಿತಚಿಂತಕರು ಯಾರೂ ಇಲ್ಲ ಎನ್ನುವ ನಿಸ್ಸಹಾಯಕತೆ ಒಟ್ಟಿಗೆ ಕೂಡಿ ಅತ್ತಳು. ಪ್ರಾಣೇಶಾಚಾರ್ಯರಿಗೆ ಪಶ್ಚಾತ್ತಾಪ, ತಟ್ಟನೆ ಪರಕೀಯಳಾದ ಯೌವನದ ಹೆಣ್ಣೊಬ್ಬಳ ಬಿಗಿಯಾದ ಸ್ಪರ್ಶದಿಂದ ತಬ್ಬಿಬ್ಬಾಗಿಸಿ ಆಶೀರ್ವದಿಸಲೆಂದು ಬಾಗಿ ಕೈ ನೀಡಿದರು. ಬಾಚಿದ ಕೈಗೆ ಅವಳ ಬಿಸಿ ಉಸಿರು, ಕಣ್ಣೀರು ತಾಗಿ ರೋಮಾಂಚದ ಮಾರ್ದವ ಉಕ್ಕಿ ಅವಳ ಚೆಲ್ಲದ ಕೂದಲನ್ನು ಸವರಿದರು. ಆಶೀರ್ವಾದದ ಸಂಸ್ಕೃತ ಬಾಯಿಂದ ಹೊರಡಲಿಲ್ಲ. ತನ್ನ ತಲೆಗೂದಲಿನ ಮೇಲೆ ಅವರೆ ಕೈ ಆಡಿಸಿದ್ದರಿಂದ ಚಂದ್ರಿಗೆ ಇನ್ನಷ್ಟು ಆವೇಗವಾಗಿ, ಅವರ ಕೈಗಳನ್ನು ಭದ್ರವಾಗಿ ಹಿಡಿದು ಎದ್ದು ನಿಂತು ಪಾರಿವಾಳದ ಹಾಗೆ ಡವಗುಟ್ಟುತ್ತಿದ್ದ ತನ್ನ ಎದೆಗಳಿಗೆ ಒತ್ತಿಕೊಂಡಳು. ತನ್ನ ಕೈಗಳೆಂದೂ ಸ್ಪರ್ಶಿಸದ ಪುಷ್ಟವಾದ ಮೊಲೆಗಳನ್ನು ಮುಟ್ಟಿದ ಕ್ಷಣ ಪ್ರಾಣೇಶಾಚಾರ್ಯರಿಗೆ ಬವಳಿ ಬಂದಂತಾಯಿತು. ಕನಸಿನಲ್ಲೆಂಬಂತೆ ಅವುಗಳನ್ನು ಒತ್ತಿದರು. ಕೂಡಲೆ ಚಂದ್ರಿ ಕಾಲು ಒತ್ತಿಬಂದ ಆಚಾರ್ಯರನ್ನು ಅವಚಿಕೊಂಡು ಮೆತ್ತಗೆ ಕೂರಿಸಿದಳು. ಆಚಾರ್ಯರಿಗೆ ಇಷ್ಟು ಹೊತ್ತು ಮನಸ್ಸಿಗೆ ಬಾರದಿದ್ದ ಹಸಿವು ಜಗ್ಗನೆ ಸಂಕಟವಾಗಿ ಅಮ್ಮ ಎಂದರು. ಚಂದ್ರಿ ಅವರನ್ನು ಎದೆಗಾರಿಸಿಕೊಂಡು ಮಡಲಿನಿಂದ ರಸಬಾಳೆ ಹಣ್ಣುಗಳನ್ನು ತೆಗೆದು ಸುಲಿದು ತಿನ್ನಿಸಿದಳು. ನಂತರ ಪ್ರಾಣೇಶಾಚಾರ್ಯರನ್ನು ತಬ್ಬಿಕೊಂಡು ಮಲಗಿ ಗಳಗಳನೆ ಅತ್ತುಬಿಟ್ಟಳು.

ಆಚಾರ್ಯರಿಗೆ ಎಚ್ಚರವಾಗಿ ನಡುರಾತ್ರಿ ಅವರ ತಲೆ ಚಂದ್ರಿಯ ತೊಡೆಗಳ ಮೇಲಿತ್ತು. ಕೆನ್ನೆ ಅವಳ ನಗ್ನ ಕಿಬ್ಬೊಟ್ಟೆಗೆ ಒತ್ತಿಕೊಂಡಿತ್ತು. ಚಂದ್ರಿ ತನ್ನ ಬೆರಳುಗಳಿಂದ ಅವರ ತಲೆ, ಕಿವಿ, ಕೆನ್ನೆಗಳನ್ನು ಸವರುತ್ತಿದ್ದಳು. ತಾನೇ ತನಗೆ ಥಟ್ಟನೆ ಅಪರಿಚಿತನಾಗಿಬಿಟ್ಟಂತಾಗಿ ಎಲ್ಲಿದ್ದೇನೆಂದು ಯೋಚಿಸಿದರು. ಬಾಲ್ಯದ ದಿನಗಳು ಬಂದವು. ಬೆರಗಿನಿಂದ ನೋಡಿದರು. ಗರಿಬಿಚ್ಚಿದ ನವಿಲಿನಂತಹ ಅಕ್ಷಯ ನಕ್ಷತ್ರದ ರಾತ್ರಿ, ಸಪ್ತಋಷಿಗಳ ಮಂಡಲ, ವಸಿಷ್ಠರ ಪಕ್ಕದಲ್ಲಿ ನಾಚಿ ಮಿನುಗವ ಆರುಂಧತಿ. ಕೆಳಗೆ ಹುಲ್ಲಿನ.

ಹಸಿಮಣ್ಣಿನ, ವಿಷ್ಣುಕಾಂತೀಯ, ಸುಗಂಧೀಯ ಹೆಣ್ಣಿನ ಬೆವರಿದ ಮೈಯ ವಾಸನೆ, ಕತ್ತಲು ಆಕಾಶ, ನೆಮ್ಮದಿಯಿಂದ ನಿಂತ ವೃಕ್ಷಗಳು, ಕನಸೋ ಎಂದು ಕಣ್ಮುಚ್ಚಿಕೊಂಡರು. ಎಲ್ಲಿಂದ ಇಲ್ಲಿಗೆ ಬಂದೆ, ಎಲ್ಲಿಗೆ ಹೋಗಬೇಕೆಂದು ಬಂದು ಮರೆತು ಬಿಟ್ಟೆ ಎಂದು ಕಳವಳಿಸಿದರು. ಚಂದ್ರಿ ಎಂದು ಪೂರ್ಣ ಕರೆದು ಪೂರ್ಣ ಎಚ್ಚರವಾದರು. ಆಲಿಸಿದರು ಕಾಡಿನಲ್ಲಿ ಮೌನದಲ್ಲಿ, ಗುಟ್ಟುಗಳನ್ನು ಹೇಳುತ್ತಿರುವಂತಹ ಚಿಲಿಪಿಲಿ ಎನ್ನುವ ಕತ್ತಲು, ಚಿಲಿಪಿಲಿ ಎನ್ನುವ ಶಬ್ದ, ಮಿಣಕ್ ಮಿಣಕ್ ಎನ್ನುವ ಬೆಳಕಾಗಿ ರಾಶಿರಾಶಿಯಾದ ಮಿಣುಕು ಹುಳುಗಳು ತೇರಿನಂತೆ ಏರಿಬಂದು ಪೊದೆಯಿಂದ ಹೊರಗೆ ಪ್ರತ್ಯಕ್ಷವಾದವು. ಕಣ್ಣು ತುಂಬುವಂತೆ, ಕಿವಿ ತುಂಬುವಂತೆ ಆಲಿಸುತ್ತಾ ನೋಡಿದರು. ಸುತ್ತಲೂ ಮಿಣುಕು ಹುಳುಗಳ ರಾಶಿರಾಶಿ ತೇರು : ಚಂದ್ರಿ ಎಂದು ಅವಳನ್ನು ಮುಟ್ಟಿ ಎದ್ದು ಕೂತರು. ಚಂದ್ರಿ ಏಳು ಹೋಗುವ ನಾಳೆ ಬೆಳಿಗ್ಗೆ ಬ್ರಾಹ್ಮಣರು ಸೇರಿದಾಗ ಹೀಗಾಯಿತೆಂದು ಹೇಳಿಬಿಡುವ.. ಹೇಳಿದರು. ಇಲ್ಲಿ ನವ್ಯ ಸಾಹಿತ್ಯದ ಲಕ್ಷಣಗಳಾದ ಸಂಕೇತಗಳು, ತಂತ್ರ, ಪರಕೀಯತೆ, ಪ್ರತಿಮೆಗಳ ಮೂಲಕ ಭಾಷೆಯ ವಿನ್ಯಾಸಗಳು, ಲೈಂಗಿಕತೆಯ ಅಂಶ ಕಾಮದ ಚಿತ್ರಣಗಳನ್ನು ಕಾದಂಬರಿಯಲ್ಲಿ ಕಾಣಬಹುದು. ಹೀಗೆ ಪ್ರಾಣೇಶಾಚಾರ್ಯ ಮತ್ತು ಚಂದ್ರಿಯರ ಆಕಸ್ಮಿಕ ಸಮಾಗಮದ ಸನ್ನಿವೇಶದಲ್ಲಿ ನವ್ಯ ಸಾಹಿತ್ಯದ ತಂತ್ರ, ಭಾಷೆಗಳನ್ನು ಕಾವ್ಯಮಯದ ಭಾಷೆಗಳನ್ನು ವಿಶ್ಲೇಷಿಸಬಹುದು.

ಸಂಸ್ಕಾರ ಕಾದಂಬರಿಯಲ್ಲಿ ಅನಂತಮೂರ್ತಿಯವರು ನವ್ಯ ಸಾಹಿತ್ಯದ ಕೆಲವು ಸೂಕ್ಷ್ಮತೆಗಳನ್ನು ತಂದಿರುವಂತೆ ವಂಶವೃಕ್ಷ ಕಾದಂಬರಿಯಲ್ಲಿ ನವ್ಯ ಸಾಹಿತ್ಯದ ತಂತ್ರಗಳು, ಸಾಂಕೇತಿಕತೆಗಳನ್ನು ಭೈರಪ್ಪನವರು ತಂದಿರುವುದನ್ನು ಕಾಣಬಹುದು. ಕಾತ್ಯಾಯಿನಿ ಕಾಲೇಜಿಗೆ ಸೇರಿಕೊಂಡು ರಾಜರಾಯನ ಬಗ್ಗೆ ಪ್ರೇಮಭಾವ ಮೂಡಿ ಹೊತ್ತಿಗೆ ಮಲ್ಲಿಗೆ ಆಸರೆಯಾಗಿದ್ದ ಮರ ಒಣಗಿದ್ದು ಅದಕ್ಕೆ ಬದಲಿ ವ್ಯವಸ್ಥೆ ಮಾಡಿದ್ದು, ರೈಲಿನಲ್ಲಿ ಕಾಲೇಜಿಗೆ ಬರುವಾಗ ಪ್ರಕೃತಿಯ ಚಿತ್ರಣ ಹಾಗೂ ರಾಜ ಮತ್ತು ಕಾತ್ಯಾಯಿನಿಯರ ಸಮಾಗಮದ ಸನ್ನಿವೇಶಗಳಲ್ಲಿ ನವ್ಯ ಸಾಹಿತ್ಯದ ಪ್ರತಿಮೆ ಸಂಕೇತಗಳನ್ನು ಕಾಣಬಹುದು.

ಕಾದಂಬರಿಯ ಪ್ರಾರಂಭದಲ್ಲಿ ಕಪಿಲಾ ನದಿಯ ಪ್ರವಾಹ, ಅದರಲ್ಲಿ ಶ್ರೋತ್ರಿಯವರ ಮಗ ನಂಜುಂಡಶ್ರೋತ್ರಿ ಪ್ರವಾಹದ ಸುಳಿಗೆ ಸಿಲುಕಿ ಸಾಯವುದು. ಅವನ ಅಪರ ಕರ್ಮಗಳನ್ನು ನದಿಯ ತೀರದಲ್ಲಿ ಮಾರುವುದು. ಧರ್ಮದ ನಿಷ್ಠೆ ಹಾಗೂ ಕಾದಂಬರಿಯ ಬೆಳವಣಿಗೆಯ ತಂತ್ರವಾಗಿ ಲೇಖಕರು ಮಾಡಿಕೊಂಡಿದ್ದಾನೆ. ಕಾಲೇಜಿಗೆ ಸೇರುವ ವಿಚಾರವಾಗಿ ಮಾವನಲ್ಲಿ ಹೇಳಿದಾಗ ಅವರ ಅನುಮತಿ ದೊರೆಯುವುದು. ಪ್ರತಿನಿತ್ಯ ಕಾಲೇಜಿಗೆ ಹೋಗಿ ಬರುವಾಗ ರೈಲಿನಲ್ಲಿ ಪ್ರಯಾಣ ಅವಳಿಗೆ ಒಳ್ಳೆಯ ಆಂತರಿಕ ಭಾವದ ಅನುಭವ ನೀಡಿತು. ಜ್ಯೇಷ್ಠ ಮಾಸದ ಜಡಿಮಳೆಯ ಆರಂಭವಾಗಿ ಕಪಿಲೆಯಲ್ಲಿ ತಕ್ಕಮಟ್ಟಿಗೆ ಹೊಳೆ ಬಂದಿತ್ತು. ದಳವಾಯಿ ಸೇತುವೆಯ ಮೇಲೆ ತೆವಳುತ್ತಿದ್ದಾಗ ಅವಳ ದೃಷ್ಟಿಗೆ ಬಿದ್ದವು. ಅರ್ಧಮೈಲಿ ದೂರದಲ್ಲೆ ಶ್ರೀಕಂಠೇಶ್ವರ ದೇವಾಲಯವು ಸ್ಥಿರವಾಗಿ ನಿಂತಿತ್ತು. ದೇವಾಲಯದ ಎರಡು ಪಕ್ಕದಲ್ಲೆ ಸಾಲಾಗಿ ಮೆಟ್ಟಿಲು ಹಾಕಿದ ಸ್ನಾನಘಟ್ಟಗಳು ಅವೇ ಸ್ನಾನಘಟ್ಟಗಳಲ್ಲಿ ಈಗ ಎರಡು ವರ್ಷದ ಹಿಂದೆ ಅವಳ ಕುಂಕುಮದ ಒಡೆಯನಾದವನು ಒಂದು ದಿನ ಅವಳ ಜೀವನವನ್ನೆ ಶೂನ್ಯಮಾಡಿ

ಮುಳುಗಿ ಹೋಗಿದ್ದು, ರೈಲು ಚಲಿಸುತ್ತಾ ಮುಂದೆ ಸಾಗಿದಂತೆ ಚಾಮುಂಡಿಬೆಟ್ಟ ಕಾತ್ಯಾಯಿನಿಗೆ ಆಕರ್ಷಕವೆನಿಸುತ್ತಿತ್ತು. ಗಂಡನೊಡನೆ ಎರಡು ಸಲ ಬೆಟ್ಟಕ್ಕೆ ಹೋಗಿದ್ದ ನೆನಪು ಇವೆಲ್ಲವೂ ಕಾತ್ಯಾಯಿನಿ ಮನಸ್ಸಿನ ಭಾವವನ್ನು ತೀವ್ರತರವಾಗಿ ಸ್ಮೃತಿಯ ನೆನಪುಗಳ ಭಾವಸ್ಪಂದನೆಯನ್ನು ನೀಡಿದವು.

ಒಂದು ವರ್ಷದ ಕಾಲೇಜು ಮುಗಿಸಿದ ಕಾತ್ಯಾಯಿನಿ ರಾಜರಾಯರು ಎಂತಹ ಪ್ರತಿಭಾಶಾಲಿ, ಅವರಂತೆ ಷೇಕ್ಸ್‌ಪಿಯರ್‌ನನ್ನು ಯಾರು ತಾನೇ ಹೇಳಬಲ್ಲರು. ನಾಟಕ ಕಲಿಸಿ ಆಡಿಸುವುದರಲ್ಲಿ, ತಾನೇ ಸ್ವತಃ ಪಾತ್ರ ವಹಿಸುವುದರಲ್ಲಿ ಎಂತಹ ಕೌಶಲ! ಕಾಲೇಜಿನ ಎಷ್ಟೋ ಹುಡುಗಿಯರು ಅವರಿಂದ ಆಕರ್ಷಿತರಾಗಿದ್ದಾರೆ. "ಆದರೂ ರಾಜರಾಯರು ಪ್ರತಿಭಾಶಾಲಿಗಳು, ಸ್ನೇಹಪರರು, ಮೇಲಾಗಿ ವಿನೋದಿಗಳು. ಮೂಕಿಯ ಹಾಗಿದ್ದ ನನ್ನನ್ನು ಎಷ್ಟು ಬೇಗ ಮಾತನಾಡಿಸಿ ಬಿಟ್ಟರು. ತಮ್ಮ ಹೆಸರಿನಲ್ಲಿ ಪುಸ್ತಕ ಕೊಡಿಸುತ್ತಾರೆ. ಇಷ್ಟೆಲ್ಲಾ ಇದ್ದೂ ಇನ್ನೂ ಮದುವೆಯೇ ಆಗಿಲ್ಲವಂತೆ. ಏನು ಕಾರಣವೋ? ಅವರನ್ನು ಕೈಹಿಡಿದ ಯಾವ ಹುಡುಗಿಯಾದರೂ ಸುಖವಾಗಿರುತ್ತಾಳೆ ಎಂಬಂತ ಭಾವ ಮೂಡಿ ಅವಳ ಈ ಮಾತಿನಲ್ಲಿ ರಾಜರಾಯರ ಬಗ್ಗೆ ಆಕರ್ಷಿತಳಾಗಿರುವುದು ಮನಸ್ಸಿನಲ್ಲಿ ವ್ಯಕ್ತವಾಗುತ್ತದೆ. ಇದಕ್ಕೆ ಪೂರಕವಾಗುವಂತೆ ಲೇಖಕರು ಒಂದು ಪ್ರತಿಮೆಯನ್ನು ಕಾದಂಬರಿಯಲ್ಲಿ ತಂದಿದ್ದಾರೆ. ಅದೇನೆಂದರೆ "ರಜೆಯಲ್ಲಿ ಮಧ್ಯಾಹ್ನದ ವೇಳೆ ಕಾತ್ಯಾಯಿನಿ ಮನೆಯ ಹಿಂದಿನ ಹೂವಿನ ಮತ್ತು ತರಕಾರಿಯ ಗಿಡಗಳಿಗೆ ನೀರೆಯಲು ಹೋಗುವಳು. ಕೊಂಡಮಾವಿನ ಮರಕ್ಕೆ ಹಬ್ಬಿದ ಮೆಲ್ಲಗೆಯ ಬಳ್ಳಿಗೆ ನೀರೆಯುವಾಗ ತನ್ನ ಪತಿಯ ನೆನಪಾಗುವುದು. ಇದೇ ಬಳ್ಳಿಗೆ ತಾನು ಹಿಂದೆ ನೀರು ಹಾಕುತ್ತಿದ್ದಾಗ ಅವರು ಏನೆಲ್ಲ ಕೀಟಲೆ ಮಾಡುತ್ತಿದ್ದರು! ಅದು ತನಗೆ ಪ್ರಿಯವಾಗಿದ್ದರೂ ಯಾರಾದರೂ ನೋಡಿಯಾರೆಂಬ ಭಯದಿಂದ ಗಂಡನ ಮೇಲೆ ಕೋಪಿಸಿಕೊಂಡಿದ್ದುಂಟು. ಈಗ ಮೆಲ್ಲಿಗೆಯ ಬಳ್ಳಿಯನ್ನು ಬಿಟ್ಟ ಅವಲು ಬೇರೊಂದು ಗಿಡದ ಕಡೆಗೆ ಹೋಗುವಳು. ಮೊದಲು ಅವಳು ತಲೆಗೆ ಜಿಗಿಯುವಷ್ಟು ಹೂ ಮುಡಿಯುತ್ತಿದ್ದಳು. ಅವಳು ಎಷ್ಟು ಹೂ ಮುಡಿದರೂ ಗಂಡನಿಗೆ ಸಾಲದು. ಈಗಲೂ ಮಲ್ಲಿಗೆಯ ಬಳ್ಳಿ ದಿನವೂ ಒಂದು ರಾಶಿ ಹೂ ಬಿಡುತ್ತದೆ. ಅದರಲ್ಲಿ ಬಹುಭಾಗ ದೇವರ ಪೂಜೆಗೆ ಪೂಜೆಯಾದ ನಂತರ ಒಂದು ಹತ್ತು ಹೂವನ್ನು ಪ್ರಸಾದವೆಂದು ಅತ್ತೆ ಮುಡಿಯುತ್ತಾಳೆ. ಉಳಿದುದರಲ್ಲಿ ಸ್ವಲ್ಪ ಭಾಗ ಮತ್ತೆ ಸಾಯಂಕಾಲದ ಪೂಜೆಗೆ ಉಳಿದಿದ್ದ ಕೇಳಿದ ಹೆಂಗಸರಿಗೆ ಹೋಗುತ್ತದೆ. ಹೀಗೆ ಒಂದು ದಿನ ಮಲ್ಲಿಗೆಯ ಬಳ್ಳಿಗೆ ನೀರೆಯುವಾಗ ಅವಳು ಗಮನಿಸಿದಳು. ಮಲ್ಲಿಗೆಯ ಬಳ್ಳಿಗೆ ಹೊರವಾಗಿ ಹಬ್ಬಿಕೊಂಡಿದ್ದ ಕೊಂಡಮಾವಿನ ಮರವು ಒಳಗಿನಿಂದ ಒಣಗಿ ಹೋಗಿತ್ತು. ಅದು ಆಗಲೇ ಹಳೆಯದಾದ ಮರ.

ಅವಳು ಹೋಗಿ ಸಂಗತಿಯನ್ನು ಮಾವನವರಿಗೆ ಹೇಳಿದಾಗ ಅವರು ಒಬ್ಬ ಆಳನ್ನು ಕರೆಸಿದ ಒಣಗಿದ ಮರವನ್ನು ಉಪಾಯವಾಗಿ ಕಡಿಸಿದರು. ಅದನ್ನು ನಿಬಿಡವಾಗಿ ಅಪ್ಪಿಕೊಂಡಿದ್ದ ಬಳ್ಳಿಯ ಎಲೆಗಳನ್ನು ಎಚ್ಚರವಾಗಿ ಬಿಡಿಸಿ ಮರವನ್ನು ಅಲ್ಲಿಂದ ಸಾಗಿಸಿದರು. ಆಸರೆಯಾಗಿ ಒಂದು ಬಿದಿರಿನ ಗಳುವನ್ನು ನೆಡಿಸಿ ಅದಕ್ಕೆ ಬಳ್ಳಿಯನ್ನು ಒರಗಿಸಿದರು. ಹತ್ತಿರದಲ್ಲೇ ಮತ್ತೊಂದು ಕೊಂಡಮಾವಿನ ಕೊನೆ

ನೆಟ್ಟು ದಿನವೂ ಅದಕ್ಕೆ ನೀರೆಯುವಂತೆ ಕಾತ್ಯಾಯಿನಿಗೆ ಹೇಳಿದರು. ಹದಿನೈದು ದಿನದಲ್ಲಿ ಹೊಸ ಕೊನೆ ಚಿಗುರಿತು. ಶ್ರೋತ್ರಿಯರು ಮಲ್ಲಿಗೆಯನ್ನು ಹೊಸ ಗಿಡಕ್ಕೆ ಹಬ್ಬಿಸಿದರು.

"ಹಳೆಯ ಮರ ಸತ್ತ ಮೇಲೂ, ಹೊಸ ಮರಕ್ಕೆ ಹಬ್ಬಿಕೊಂಡು ಮಲ್ಲಿಗೆಯು ಮೊದಲಿನಂತೆಯೇ ಬಂದು ರಾಶಿ ಹೂ ಬಿಡುವುದನ್ನು ಕಂಡು ಕಾತ್ಯಾಯಿನಿಗೆ ಆಶ್ಚರ್ಯವಾಯಿತು. ಮಲ್ಲಿಗೆಯೂ ಮರದ ಸಂಗಡ ಸುರುಟಿಹೋಗುವುದೆಂದು ಅವಳು ಆಕಾರಣವಾಗಿ ಯೋಚಿಸಿದಳು. ಈ ರೀತಿ ಮಲ್ಲಿಗೆ ಕೊಣಮಾವಿನ ಮರದ ಮೂಲಕ ಕಾತ್ಯಾಯಿನಿ ಮನಸ್ಸಿನ ಭಾವನೆ ಕೆರಳಲು ಅವಳು ರಾಜರಾಯನ ಬಗ್ಗೆ ಪ್ರೀತಿಯ ಭಾವ ಮೂಡುವಂತಾಯಿತು. ಇದು ಕಾದಂಬರಿಯಲ್ಲಿ ಸಂಕೇತವಾಗಿ, ನಂಜುಂಡಶ್ರೋತ್ರಿ ಒಣಗಿಹೋದ ಕೊಣಮಾವಿನ ಕೊನೆಯಾಗಿಯು, ಮಲ್ಲಿಗೆ ಬಳ್ಳಿಯಾಗಿ ಕಾತ್ಯಾಯಿನಿಯು, ಹೊಸ ಕೊಣಮಾವಿನ ಮರವಾಗಿ ರಾಜರಾಯನು, ಅದಕ್ಕೆ ಒಪ್ಪಿಗೆ ಸೂಚಿಸುವಂತಹ ವ್ಯಕ್ತಿಯಾಗಿ ಶ್ರೀನಿವಾಸಶ್ರೋತ್ರಿಯ ಪಾತ್ರಗಳಿಗೆ ಪ್ರತಿಮೆಯಾಗಿ ನಿಂತಿವೆ. ಇವು ಓದುಗರ ಮೇಲೆ ಪ್ರಭಾವಬೀರುವ ಸಂಕೇತಗಳಾಗಿ ಕಂಡು ಬರುತ್ತವೆ.

ರಾಜರಾಯನ ಮನಸ್ಸಿನಲ್ಲಿ ಕಾತ್ಯಾಯಿನಿ ಬಗ್ಗೆ ಮೂಡಿದ ಅನುರಾಗವನ್ನು ರಾಜಾಯನಿಗೆ ಬೆಳಗಿನ ಜಾವ ಕನಸು ಬೀಳುವುದು. ತಾನು ರಚಿಸುತ್ತಿದ್ದ ನಾಟಕವೇ ಕನಸಿನ ರೂಪದಲ್ಲಿ ಕಾಣುವುದು. ನಾಟಕದ ಒಂದು ಪಾತ್ರವನ್ನು ಸೃಷ್ಟಿಸಿಕೊಂಡು ಮೂರ್ತಸ್ವರೂಪ ತಾಳಿತ್ತು. ಒಬ್ಬ ಸುಂದರ ಯುವತಿ, ಸುಮಾರು ಇಪ್ಪತ್ತೇರಡು ವರ್ಷಗಳು ಮನಸ್ಸನ್ನು ಅಪಹರಿಸುವಂತಹ ನಿಲುವು. ಮೈ ಆರೋಗ್ಯದ ಶುಭ್ರಕಾಂತಿಯಿಂದ ಬೆಳಗುತ್ತಿದೆ. ನಡೆಯುತ್ತಿದ್ದರೆ ರಕ್ತ ಚಿಮ್ಮುವ ಹಾಗೆ ಕೆಂಪಾದ ಪಾದಗಳು, ನೀಳವಾದ ಕೈಬೆರಳುಗಳು, ಕಲೆಯಲ್ಲಿ ಮಾತ್ರ ಚಿತ್ರಿಸಬಹುದಾದ ಸುಂದರಿಯ ಬೆರಳುಗಳಂತಿವೆ. ಮೈಮೇಲೆ ಒಂದು ಆಭರಣಗಳಿಲ್ಲ. ನೀಳವಾಗಿ ಕಪ್ಪುಬಣ್ಣದಿಂದ ಮಿನುಗುವ ತಲೆಕೂದಲು, ಗಂಭೀರ ಮುಖ, ಸುಕುಮಾರವಾದ ಅಂಗಾಂಗಗಳಲ್ಲೂ ಚಿಮ್ಮುವ ಸ್ತ್ರೀಚೈತನ್ಯ. ಅದ್ಭುತ ಸುಂದರಿ ಬೆಳದಿಂಗಳು ಘನರೂಪ ತಾಳಿ ಲಾವಣ್ಯದಿಂದ ಜೀವಂತವಾಗಿ ಮಿರುಗುತ್ತದೆ. ಪ್ರಕೃತಿಯ ಮೂಲ ಸೌಂದರ್ಯದ ಶಕ್ತಿಯನ್ನು ಮುಚ್ಚಿಹಾಕುವ ವಸ್ತ್ರವು ಮೈಮೇಲಿಲ್ಲ. ಸಾಮಾನ್ಯ ಸ್ತ್ರೀಗೆ ನಗ್ನತೆಯ ಅರಿವಿನಿಂದ ಆಗುವ ಲಜ್ಜೆಯ ಭಾರವು ಅಂಗಸೌಷ್ಠವವನ್ನು ಸಂಕುಚಿಸುತ್ತಿಲ್ಲ. ಪಕ್ಕದಲ್ಲಿ ಬಂದು ರಾಶಿ ಕೆಂಪು ಗುಲಾಬಿಯ ಹೂವಿದೆ. ಎರಡು ಕೈಗಳಿಂದಲೂ ಅವಳು ಒಂದು ಪುಷ್ಪವಾದ, ತುಂಬಿ ಬೀಗುವ ಹಾರವನ್ನು ಕಟ್ಟುತ್ತಿದ್ದಾಳೆ. ಗಿಡದ ಆಚೆ ನೂರಾರು ಜನಗಳು ಏಕಕಂಠದಿಂದ ಕೂಗುವ ಶಬ್ಧ ಕೇಳುತ್ತಿದೆ. ನೀನು ವಿಧವೆ, ನಿನ್ನ ಹಾರವನ್ನು ನಮ್ಮಲ್ಲಿ ಯಾರೂ ಸ್ವೀಕರಿಸುವುದಿಲ್ಲ. ಕನಸ್ಸು ಅಷ್ಟಕ್ಕೆ ನಿಂತು ಹೋಯಿತು. ಇದೇ ವಸ್ತುವನ್ನು ಒಂದು ನಾಟಕವನ್ನಾಗಿ ಬರೆಯಬೇಕೆಂದು ತೀರ್ಮಾನಿಸಿ, ಕನಸ್ಸಿನಲ್ಲಿ ಕಂಡ ಆ ಸುಪುಷ್ಪ ಸುಂದರ ತರುಣಿಯನ್ನು ಎಲ್ಲಿಯೂ ತಾನು ನೋಡಿರುವುದಾಗಿ ಜ್ಞಾಪಿಸಿಕೊಳ್ಳಲು ಯತ್ನಿಸಿದ. ಅವಳ ಚಿತ್ರವಾದರೋ ಸ್ಪಷ್ಟವಾಗಿ ಸ್ಮೃತಿಯಲ್ಲಿತ್ತು. ಆದರೆ ಯಾರ ಚಿತ್ರವನ್ನೆನುವುದು ನೆನಪಿಗೆ ಬರಲಿಲ್ಲ. ಎರಡು ದಿನದ ಮೇಲೆ ಸುಳಿವು ಸಿಕ್ಕಿತು. ಮತ್ತರದೂ ಆಗಿರದ ತನ್ನ ವಿದ್ಯಾರ್ಥಿನಿಯೇ ಆದ ಕಾತ್ಯಾಯಿನಿ ಚಿತ್ರವಾಗಿತ್ತು. ಇದೇನು ಹೀಗೆ!

ಎಂದು ಅವನಿಗೆ ಆಶ್ಚರ್ಯವಾಯಿತು. ಈ ಪ್ರತಿಮೆ, ಪ್ರಕೃತಿ ತಂತ್ರದ ಮೂಲಕ ರಾಜರಾಯನಿಗೆ ಕಾತ್ಯಾಯಿನಿಯ ಮೇಲಿನ ಪ್ರೇಮದ ಭಾವವನ್ನು ತರುವ ತಂತ್ರವಾಗಿ ಲೇಖಕರು ಕಾದಂಬರಿಯಲ್ಲಿ ತಂದಿದ್ದಾರೆ.

ಮೂಲತತ್ವ ನಾಟಕ ರಚಿಸಿ ಅದರಲ್ಲಿ ಕಾತ್ಯಾಯಿನಿ ಪ್ರಕೃತಿಯ ಪಾತ್ರ ಮತ್ತು ರಾಜರಾಯರು ಪುರುಷನ ಪಾತ್ರ ನೋಡುವುದು. ಇದು ಕೂಡಾ ಪ್ರಕೃತಿ ಮತ್ತು ಪುರಷನ ಪಾತ್ರದ ಮೂಲಕ ಕಾತ್ಯಾಯಿನಿ ಮತ್ತು ರಾಜರಾಯರ ಇಬ್ಬರಲ್ಲೂ ಮನಸ್ಸಿನಲ್ಲಿ ಇರುವ ಪ್ರೀತಿಯ ದ್ಯೋತಕವಾಗುವಂತೆ ನವ್ಯಸಾಹಿತ್ಯದ ತಂತ್ರವನ್ನು ಪ್ರತಿಮೆಗಳ ಮೂಲಕ ಚಿತ್ರಿಸಿದ್ದಾರೆ. ನಂತರ ಈ ಇಬ್ಬರೂ ಪರಸ್ಪರ ಪ್ರೀತಿಯ ವ್ಯಕ್ತಪಡಿಸಿದಾಗ ಅವರಿಬ್ಬರ ಸಮಾಗಮದ ಚಿತ್ರಣವನ್ನು ಲೇಖಕರು ಬಹಳ ಸೊಗಸಾಗಿ ಚಿತ್ರಿಸಿದ್ದಾರೆ.

ರಾಜರಾಯ ಮೂಲತತ್ವ ನಾಟಕ ಮುಗಿದ ನಂತರ ಈಗ ಇಬ್ಬರೂ ಬಹಳಷ್ಟು ಸಲುಗೆಯಿಂದ ಹತ್ತಿರವಾಗುತ್ತಾರೆ. ಒಂದು ದಿನ ಕಾಲೇಜಿಗೆ ಬಂದು ಎಲ್ಲಿಗಾದರೂ ಕರೆದುಕೊಂಡು ಹೋಗಿ ಎಂದಳು. ಇಬ್ಬರು ಸೈಕಲಿನಲ್ಲಿ ಬಹಳ ದೂರ ಬಂದ ಮೇಲೆ ಒಂದು ಕಡೆ ಕುಳಿತರು. ರಾಜ ಅವಳನ್ನು ದಿಟ್ಟಿಸಿ ನೋಡುತ್ತಲೆ ಇದ್ದ ಕೈಯಲ್ಲಿದ್ದ ಮಾಲೆಯನ್ನು ಅವಳು ಅವನ ಕೊರಳಿಗೆ ಹಾಕಿ ತನ್ನ ಕಣ್ಣು ಮುಚ್ಚಿಕೊಂಡಳು. ಅವನು ಮೃದುವಾಗಿ ಅವಳ ಭುಜ ಹಿಡಿದು ಅವಳನ್ನು ತನ್ನ ತೊಡೆಗಳಿಗೆ ಒರೆಗಿಸಿ ತೋಳುಗಳಲ್ಲಿ ಭದ್ರವಾಗಿ ಅಪ್ಪಿ ಹಿಡಿದ. ಸುತ್ತಲೂ ಇದ್ದ ಮರಗಳು ಕಳೆ ಏರಿದ ಹಸಿರಿನ ಚೈತನ್ಯದಿಂದ ಬೀಗುತ್ತಿದ್ದವು. ತೊರೆಯಲ್ಲಿ ಸಣ್ಣಗೆ ಹರಿಯುತ್ತಿದ್ದ ನೀರು ಪ್ರಚಂಡ ಚೈತನ್ಯದ ಪ್ರತೀಕವಾಗಿತ್ತು. ಅವನ ಕೊರಳಿನಲ್ಲಿದ್ದ ಜಾಜಿಯ ಮಾಲೆ ಅವರಿಬ್ಬರನ್ನೂ ಅಸಾಧಾರಣ ಮನಃಸ್ಥಿತಿಗೆ ಏರಿತ್ತು. ತರುಣಿಯ ಸುಂದರ ಸ್ಪರ್ಶದ ಅನುಭವದಿಂದ ಅವನು ಕಂಪಿಸುತ್ತಿದ್ದ, ಪುರುಷ ಸನ್ನಿಧಿಯಿಂದ ಪ್ರಕೃತಿಯ ಉನ್ಮತ್ತಳಾಗಿ ಆ ನಿಶ್ಯೇಷ್ಟಿತ ಸ್ಥಿತಿಯಲ್ಲಿಯೂ ಅವಳ ಚೈತನ್ಯವು ತನ್ನ ಮೂಲಶಕ್ತಿಯಿಂದ ನರ್ತಿಸುತ್ತಿತ್ತು. ಅವನ ಅರೆತೆರದ ಕಣ್ಣಿನಿಂದ ಅವಳ ಮೋಹಕ ಮುಖವನ್ನು ದಿಟ್ಟಿಸುತ್ತಾ 'ಪ್ರಕೃತಿ! ಎಂದ.. ಪ್ರಕೃತಿ ವಿಧವೆಯೇ? ಅದಕ್ಕವನು ಚಿರನೂತನಳೂ ಚಿರಚೇತನಳೂ ಆದ ಪ್ರಕೃತಿಗೆ ಧರ್ಮದ ಕಟ್ಟೆಹಾಕುವುದು ಅಧರ್ಮ, ನಾಟಕದಲ್ಲಿ ಬಾಯಿ ಪಾಠವಾಗಿದ್ದ ಒಂದು ಮಾತು ಹೃದಯದಿಂದ ಅವನ ನೆನಪಿಗೆ ಬಂತು. ಆದರೆ ಲಹರಿಯಲ್ಲೇ ತನ್ಮಯಳಾಗಿ ಹೇಳಿದಳು. ನನ್ನ ಮೂಲಗುಣವೇ ಚೇತನ, ಮನ ತುಂಬುವ ವನಶ್ರೀ, ಕಣ್ಣನ್ನು ಸಂತೃಪ್ತಿಗೊಳಿಸುವ ಈ ಸುಂದರ ದೃಶ್ಯಗಳು, ಈ ತಾಣದಲ್ಲಿ ಹರಿಯುವ ತೊರೆ, ಇವುಗಳಿಗೆ ಯಾವಧರ್ಮವಾದರೂ ವೈವಿದ್ಯದ ಸೋಂಕು ತಗುಲಿಸಬಲ್ಲದೇ? ಎಂದೆಲ್ಲಾ ಮಾತನಾಡಿ ಮೈಮರೆತು, ತನ್ನ ಕೊರಳಿನಲ್ಲಿದ್ದ ಹಾರವನ್ನು ಅವಳಿಗೂ ಹಾಕಿ ಒಂದೇ ಮಾಲೆಯನ್ನು ಇಬ್ಬರು ಹಾಕಿಕೊಂಡು ಅವನು ಕೇಳಿದ ಈಗ ನಿನ್ನ ಮನಸ್ಸಿನ ದ್ವಂದ್ವ ನಿಂತಿತೆ?.

ಕಾತ್ಯಾಯಿನಿ ಕಣ್ಣು ತುಂಬ ನಿದ್ರೆ ಮಾಡಿದಳು. ರಣಾಂಗಣವಾಗಿದ್ದ ಅವಳ ಮನಸ್ಸು ಈಗ ಸುಂದರವಾದ ನೃತ್ಯರಂಗವಾಗಿತ್ತು. ಅವಳು ಆ ದಿನದಿಂದ ದಿನವೂ ರಾಜನನ್ನು ಕಾಣುತ್ತಿದ್ದಳು. ಒಂದು ದಿನ ಬೇಗ ಎದ್ದು ವಿಶೇಷ ತರಗತಿ ಇದೆ ಎಂದು ಹೇಳಿ ಹೊರಟಳು. ರೈಲಿನಲ್ಲಿ ಕಿಟಕಿಯಾಚೆ

ನೋಡುತ್ತಾ ಒಬ್ಬ ರೈತ ಹೇಲಿದ ರಾಗಿ ಬೆಳೆ ಈ ವರ್ಷ ಪಸ್ಟ್ ಐತೆ" ಪೈರು ಹಸುರಾಗಿ ಬೆಳೆದೈತೆ ನಿಜ ಇನ್ನೂ ಮಳೆಬೇಕು. ಭೂಮಿಗೂ ಆಕಾಶರಾಯನಿಗೂ ಮತ್ತೆ ಮತ್ತೆ ಜೋಡಿ ಆಗ್ದೆ ಇದ್ರೆ ಚಂದಾಗಿ ಬೆಳೆಯೋದಿಲ್ಲ. ಇವತ್ತು ಮಳೆ ಆಗೋ ಹಂಗೆ ಐತೆ. ಮಾಡ ಏರ್ತಾ ಐತೆ. ಹತ್ತಿರದಲ್ಲೆ ಇದ್ದ ಒಬ್ಬ ಅನುಭವಿ ಮುದುಕ ಹೇಳಿದ "ಈ ಮುದುಕನ ಮತು ಕಾತ್ಯಾಯಿನಿ ಮನಸ್ಸು ಎಂಬುದನ್ನು ಚಿತ್ರಿಸುವುದಕ್ಕಾಗಿ ಮುದುಕನ ಪಾತ್ರವನ್ನು ಲೇಖಕರು ತಂದಿದ್ದಾರೆ. ಕಾತ್ಯಾಯಿನಿ ಕಿವಿ ಮುದುಕನ ಮಾತು ಕೇಳಿ ಕಿಟಕಿಯ ಹೊರಗಡೆ ನೋಡಿದಳು. ನಿಡಿದಾಗಿ ಬೆಳೆದಿದ್ದ ಹೊಲಗಳು ಮಳೆಯನ್ನು ಬೇಡುತ್ತಿದ್ದವು. ನೆಲವು ಒಣಗಿ ಆಕಾಶದ ನೀರಿಗಾಗಿ ಬಾಯಿಬಿಟ್ಟಿತ್ತು. ನೀರನ್ನು ಕಂಡು ಅದೆಷ್ಟೋ ದಿನವಾಗಿರುವಂತೆ ಇಡೀ ವಾತಾವರಣವೂ ಕಾಣುತ್ತಿತ್ತು. ರೈತ ಹೇಳುತ್ತಿದ್ದ 'ಮಬ್ಬಶಕೆ ಶುರುವಾಗೈತೆ, ಮಳೆ ಕುಟ್ಟಿದ್ದರೂ ಕುಟ್‌ಬೈದು" ಕಾತ್ಯಾಯಿನಿ ಅದೇ ರೈಲಿನಲ್ಲಿ ದೊಡ್ಡ ರೈಲ್ವೆ ನಿಲ್ದಾಣಕ್ಕೆ ಹೋದಳು. ರಾಜು ಅಲ್ಲೇ ಕಾಯುತ್ತಿದ್ದ ಮತ್ತೆ ಒಂದು ಫಟಲ್ ಗಾಡಿ ಹತ್ತಿ ಬೃಂದಾವನದಲ್ಲಿದ ಒಂದುದೊಡ್ಡ ಹೋಟಲಿಗೆ ಬಂದರು.

ಇಬ್ಬರೂ ಮುಂಜಾವಿನ ಉಪಹಾರವನ್ನು ತೆಗೆದುಕೊಳ್ಳುವುದರಲ್ಲಿ ಒಂಬತ್ತು ಮುಕ್ಕಾಲು ಗಂಟೆಯಾಗಿತ್ತು. ಅಷ್ಟರಲ್ಲೆ ಹೊರಗೆ ಪ್ರಚಂಡ ಬಿಸಿಲು ದಹಿಸುತ್ತಿತ್ತು. ಜೊತೆಗೆ ಆಕಾಶದ ಒಂದು ಭಾಗದಲ್ಲಿ ದಟ್ಟ ಮೋಡ ಕವಿದಿತ್ತು. ವಾತಾವರಣದಲ್ಲಿ ಉಂಟಾದ ಉಷ್ಣದಿಂದ ಅಷ್ಟು ವೇಳೆಗೆ ಅವರಿಬ್ಬರೂ ಮಬ್ಬುಸೆಕೆಯಿಂದ ಬೇಯುತ್ತಿದ್ದರು. ಹೊರಗೆ ವಿಶಾಲವಾಗಿ ಹರಡಿದ ಭೂಮಿಯು ಕಾಯ್ದು ಮಳೆಯನ್ನು ಬಯಸುತ್ತಿತ್ತು. ಭೂಮಿಯ ಮೇಲೆ ಬೆಳೆದು ಅದಕ್ಕೆ ಶೋಭೆ ತಂದಿದ್ದ ಹಸಿರಿನ ಮುಖವು ಮಳೆಯಲ್ಲದೆ ಮುದುಡುವ ಸ್ಥಿತಿಗೆ ಬಂದಿತ್ತು. ತನಗೆ ಮಳೆ ಬೇಕೆಂದು ಕೇಳುವುದು ಭೂಮಿಯ ಸ್ವಭಾವವಲ್ಲ ಅಷ್ಟರಲ್ಲಿ ಆಕಾಶವು ಪೂರ್ಣವಾಗಿಯೂ ಮೋಡಗಳಿಂದ ಮುಚ್ಚಿಹೋಗಿತ್ತು. ಕ್ರಮೇಣ ಮೋಡದ ಸಾಂದ್ರತೆ ಹೆಚ್ಚಾಗಿ ಅದೆಲ್ಲವೂ ಒಮ್ಮೆಗೆ ಕಳಚಿ ಬಿದ್ದುಬಿಟ್ಟರೆ ಆ ಪ್ರವಾಹದಲ್ಲಿ ಭೂಮಿಯ ಮೇಲಣ ಸುಂದರವಾದ ಹಸಿರು ಮುಖವು ಕೊಚ್ಚಿಹೋಗಿ ಅಲ್ಲಿ ವಿಕಾರವಾದ ಆಕಾಶ ಮಾತ್ರ ಉಳಿಯುವುದೇ ಎಂಬಷ್ಟು ಘನವಾಗಿತ್ತು ಮೋಡನ ಸ್ವರೂಪ ಆದರೂ ಮೋಡವು ಕೆಳಗೆ ಬಂದು ಭೂಮಿಯನ್ನು ಸ್ಪರ್ಶಿಸದೆ ಬಿಗುಮಾನದಿಂದಲೋ, ಸಂಕೋಚದಿಂದಲೋ ಮೇಲೆಯೇ ತೂಗುತ್ತಿತ್ತು. ಭೂಮಿಗೂ ಮೋಡಕ್ಕೂ ಒಂದು ಮುಖ್ಯ ವ್ಯತ್ಯಾಸವಿತ್ತು. ಇದು ಭಾದ್ರಪದ ಮಾಸ, ಭೂಮಿಗೆ ಹಿಂದೆ ತೃಪ್ತಿಯಾಗುವಷ್ಟು ಮಳೆಯಾಗಿತ್ತು. ಅದು ಜಲದಲ್ಲಿ ನೆನೆದು ಸಂತುಷ್ಟವಾಗಿತ್ತು. ಮಳೆ ನಿಂತ ಕೆಲವು ದಿನ ಕಳೆದ ಮೇಲೆ ಪುನಃ ಆಕಾಶವನ್ನು ನೋಡುತ್ತಿತ್ತು. ಆದರೆ ಈಗ ಆಕಾಶವನ್ನು ತುಂಬಿರುವುದು ಮೊದಲ ಬಾರಿಗೆ ಜಲವಾಗುವ ಪರಿಪಾಕಮುಟ್ಟುತ್ತಿರುವ ಹೊಸ ಮೋಡ ತನ್ನ ಭಾರವನ್ನು ಸಹಿಸುವ ಶಕ್ತಿ ತನಗೇ ಇಲ್ಲದಿದ್ದರೂ ಭೂಮಿಯ ಮೇಲೆ ಸುರಿದ ಹಿಂದಿನ ಅನುಭವ ಅದಕ್ಕಿಲ್ಲ, ವಿಸ್ಮಯದಿಂದ, ಸಂದಿಗ್ಧತೆಯಿಂದ, ಮತ್ತು ತನಗೇ ಅರಿವಾಗದ ಹೊಸ ಸ್ಥಿತ್ಯಂತರದ ಗಾಬರಿಯಿಂದಲೆಂಬಂತೆ ಮೋಡವು ಒಂದು ವಿಧವಾದ ನಿಷ್ಕ್ರಿಯಾವಸ್ಥೆಯನ್ನು ಮುಟ್ಟಿತ್ತು.

ಇಡೀ ಪ್ರಪಂಚವೇ ಬೆಂದುಹೋಗುವಂತಹ ಗಡಿಯಲ್ಲಿ ರಾಜ-ಕಾತ್ಯಾಯಿನಿಯರು ಉಬ್ಬಿಸುತ್ತಿದ್ದರು. ಈಗ ಮಳೆ ಬರಬೇಕು ಇಲ್ಲದಿದ್ದರೆ ಈ ಶಕೆ ನಿಲ್ಲುವಂತಿಲ್ಲ ಮೋಡವು ಅನಿಶ್ಚಿತ ತನದಿಂದ ತೂಗುತ್ತಿತ್ತು. ಹಾಗೆಯೇ ಮೋಡದ ಸಾಂದ್ರತೆಯು ಹೆಚ್ಚಾಗಿ ಒಮ್ಮೆ ಮಿಂಚಿದಂತಾಯಿತು. ತನ್ನದೇ ಆದ ಮಿಂಚಿನ ಮಯದಲ್ಲಿ ಭೂಮಿಯ ಸುಂದರ ರೂಪವೂ ನೀರಿನ ತೃಷೆಯೂ ಮೋಡಕ್ಕೆ ಅರ್ಥವಾಗಿರಬೇಕು. ಇಡೀ ಮೋಡವು ಒಮ್ಮಿಂದೊಮ್ಮೆಗೇ ಭೂಮಿಯ ಮೇಲೆ ಕುಸಿದಂತಾಯಿತು. ನೀರಿನ ಶಕ್ತಿಯ ಪ್ರಚಂಡ ಚೈತನ್ಯದಿಂದ ಸಂದಿಗ್ಧತೆಯು ಕೊಚ್ಚಿ ಹೋಗಿ ನಿರ್ಣಾಯಕತನವೇ ಕ್ರಿಯಾಶಕ್ತಿಯಾಗಿ ಮೋಡವು ಭೂಮಿಯನ್ನಪ್ಪಿತು. ಮಳೆ, ಗುಡುಗು, ಸಿಡಿಲುಗಳ ಅಬ್ಬರವಿಲ್ಲದ, ಮಿಂಚಿನ ಹಾವಳಿಯಿಲ್ಲದ, ಮೋಡದ ನಿರ್ಣಾಯಕತನವನ್ನು ಹೊತ್ತುಕೊಂಡು ಹೋಗುವ ಬಿರುಗಾಳಿಯ ಹೊಡೆತವಿಲ್ಲದ ಮಳೆ ತಾನೇ ತಾನಾಗಿ ಸುರಿಯಲು ಮೊದಲಾಯಿತು. ಮಳೆ ಮುಗಿಯುವ ವೇಲೆಗೆ ಮಧ್ಯಾಹ್ನವಾಗಿತ್ತು. ರಾಜ ಕಾತ್ಯಾಯಿನಿಯರು ಮಧ್ಯಾಹ್ನದ ಊಟ ಮಾಡುವ ಹೊತ್ತಿಗೆ ವಾತಾವರಣದಲ್ಲಿದ್ದ ಶಖೆ ಇಳಿದು ಹೋಗಿ, ಮನಸ್ಸನ್ನು ಮುದಗೊಳಿಸುವ ತಂಪು ಪಸರಿಸಿತ್ತು. ದೂರದಿಂದ ಬೀಸಲು ತೊಡಗಿದ್ದ ಗಾಳಿಯು ನೀರಿನಲ್ಲಿ ನೆನೆದಮಣ್ಣಿನ ಕಂಪನ್ನು ತರುತ್ತಿತ್ತು. ಭೂಮಿಯ ಹಸಿರಿಗೆ ಹೊಸ ಕಾಂತಿ ಬಂದಿತ್ತು. ಅವರು ಊಟ ಮುಗಿಸಿದರು. ಅಷ್ಟರಲ್ಲಿ ಮೋಡವು ಮತ್ತೆ ಒಟ್ಟುಗೂಡುತ್ತಿತ್ತು. ಆದರೆ ಈಗ ಕೂಡುತ್ತಿದ್ದ ಮೋಡವು ಹೊಸತಲ್ಲ ಮೊದಲು ಬಿದ್ದು ಉಳಿದದ್ದೇ ಹೊಸದಾಗಿ ಘನವಾಗುತ್ತಿತ್ತು. ಈಗ ಮೊದಲಿದ್ದ ಸಹಿಸಲಾರದ ಶಕೆ ಇರಲಿಲ್ಲ. ಮಳೆಯೂ ಶಾಂತವಾಗಿ ಬೀಳಲು ಪ್ರಾರಂಭವಾಯಿತು. ದಾರಾಕಾರದ ಹುಚ್ಚು ವೇಗವಿಲ್ಲದೆ ಶಾಂತವಾಗಿ ಬೀಳುತ್ತಿದ್ದ ಮಳೆಯನ್ನು ಶಾಂತವಾಗಿದ್ದ ಭೂಮಿಯೂ ಸ್ವಾಗತಿಸುತ್ತಿದ್ದಳು. ಆಕಾಶದಲ್ಲಿ ಕಪ್ಪು ಮುಸುಗಿರಲಿಲ್ಲ ಬಾನು ಆ ಮೋಡದಲ್ಲಿಯೂ ಮಂದ ಪ್ರಕಾಶದಲ್ಲಿ ರಂಜಿಸುತ್ತಿತ್ತು.

ಹೀಗೆ ಈ ರೀತಿಯಲ್ಲಿ ತಮ್ಮ ಬರವಣಿಗೆಯ ಶೈಲಿಯ ಮೂಲಕ ಪ್ರತಿಮ, ಸಂಕೇತಗಳ ಮೂಲಕ ನವ್ಯಸಾಹಿತ್ಯದ ತಂತ್ರದ ಮೂಳಕ ಭೈರಪ್ಪನವರು ಕಾತ್ಯಾಯಿನಿ-ರಾಜರಾಯ ಅವರ ಸಮಾಗಮದ ಚಿತ್ರಣವನ್ನು ಆಕಾಶದಲ್ಲಿನ ಮಳೆ - ಭೂಮಿಯ ಪ್ರತಿಮೆಗಳ ಮೂಲಕ ತಂದಿದ್ದಾರೆ. ಎಲ್ಲಿಯೂ ಕೂಡ ಓದುಗರಲ್ಲಿ ಮುಜುಗರ ತರುವಂತ ಬರವಣಿಗೆ ಇಲ್ಲ.ಈ ಕಾದಂಬರಿಯಲ್ಲಿ ಲೇಖಕರು ಒದುಗರ ಭಾವಸ್ಪಂದನೆಗೆ ಹೆಚ್ಚು ಹೊತ್ತು ಕೊಟ್ಟು ಮಾನವ ಸಹಜ ಬಯಕೆ, ಅದಕ್ಕಾಗಿ ಕಾದಂಬರಿಯ ಪಾತ್ರಗಳು ಯಾವರೀತಿ ಹೊಂದಿಕೊಂಡು ಹೋಗುತ್ತವೆ ಎನ್ನುವುದನ್ನು ಕಾಣಬಹುದು.

ಸಂಸ್ಕಾರ ಮತ್ತು ವಂಶವೃಕ್ಷ ಕಾದಂಬರಿಗಳಲ್ಲಿ ಲೇಕಕರು ಬಳಸಿರುವ ಭಾಷೆ ನವ್ಯಸಾಹಿತ್ಯದಲ್ಲಿನ ಭಾಷೆಯಾದರೂ ಅನಂತಮೂರ್ತಿಯವರ ಹೆಚ್ಚು ಸಂಕೇತಗಳನ್ನು ಬಳಸಿಕೊಂಡರು ಓದುಗರಿಗೆ ಬೇಗ ಅರ್ಥೈಸುವ ಹಾಗೆ ಚಿತ್ರಿಸಿದ್ದಾರೆ. ಭೈರಪ್ಪನವರು ವಂಶವೃಕ್ಷದಲ್ಲಿ ಸುದೀರ್ಘ ಬರವಣಿಗೆಯಲ್ಲಿ ಸಾಹಿತ್ಯದ ಶಿಷ್ಟತನ, ಮಡಿವಂತಿಕೆಯ ಭಾಷೆಯ ಮೂಲಕ ತರುವಂತ ಪ್ರಯತ್ನ ಮಾಡುದ್ದಾರೆ. ವಂಶವೃಕ್ಷದಲ್ಲಿ,

ಎರಡು ಕುಟುಂಬಗಳ ಕತೆಯು ಜೊತೆಜೊತೆಯಾಗಿ ಸಾಗಿ ಅಲ್ಲಲ್ಲಿ ಸಂಧಿಸುತ್ತ ಮತ್ತೆ ಬೇರೆಬೇರೆಯಾಗಿ ಮುಂದುವರಿಯುವ ವಸ್ತು ವಿನ್ಯಾಸವಿದೆ. ಓದುಗರ ಕುತೂಹಲವನ್ನು ಕೆರಳಿಸಿ ರಹಸ್ಯಮಯತೆಯನ್ನು ಕಾಪಾಡುವ ಸಲುವಾಗಿ ಕಾದಂಬರಿಕಾರರು ತಂತ್ರವಾಗಿ ಬಳಸಿಕೊಂಡಿದ್ದಾರೆ. ಈ ಇಬ್ಬರೂ ಲೇಖಕರ ಗದ್ಯಶೈಲಿಯೂ ಬೇರೆ ಬೇರೆ ಬಗೆಯದು ಸಂಸ್ಕಾರದಲ್ಲಿ ಬಿಗಿಯಾದ ಪ್ರಾಯೋಗಿಕ ಶೈಲಿಯೂ. ವಂಶವೃಕ್ಷದಲ್ಲಿ ವಾಚಾಳತನದ ಕಿರುಗಾಲುತನದ ಶೈಲಿ. ಎರಡರಲ್ಲೂ ಸಾಮಾಜಿಕ ತಾಕಲಾಟ. ಹಿಂದಿದ್ದು ವ್ಯಕ್ತಿಗತ ತೊಳಲಾಟಗಳು ಮುಂದಿವೆ. ಈ ಎರಡು ಕೃತಿಗಳು ಕನ್ನಡದ ಎರಡು ಸಫಲ ಕೃತಿಗಳು ಕರ್ನಾಟಕ ಬ್ರಾಹ್ಮಣ ಸಮಾಜದ ವ್ಯವಸ್ಥೆ, ನವ್ಯ ಮಧ್ಯಮ ವರ್ಗದ ಪ್ರಸವ ವೇದನೆ ಅನುಭವಿಸುತ್ತಿದ್ದ ವ್ಯಾಪಕ ಖಿನ್ನತೆಯನ್ನು ವ್ಯಕ್ತಿಗತ ಸಂಕಟವನ್ನು ಚಿತ್ರಿಸುತ್ತದೆ.

ಅಧ್ಯಾಯ – 5

# ದೃಷ್ಟಿ ಧೋರಣೆಗಳು

ಸಂಸ್ಕಾರ–ವಂಶವೃಕ್ಷ ಈ ಕಾದಂಬರಿಗಳನ್ನು ಬರೆದಿರುವ ಇಬ್ಬರು ಲೇಖಕರು ಬ್ರಾಹ್ಮಣರೆ. ಈ ಎರಡು ಕೃತಿಗಳು ಸನಾತನ ಧರ್ಮ, ನಂಬಿಕೆ, ಸಂಪ್ರದಾಯ, ಆಚರಣೆಗಳನ್ನು ವ್ಯಕ್ತಪಡಿಸುವ ಕಾದಂಬರಿಗಳಾದರು ಪ್ರಗತಿಪರ ಚಿಂತನೆ ಕ್ರಮ ಮನೋಧೋರಣೆಗಳನ್ನು ಬಿಂಬಿಸುತ್ತವೆ ನವ್ಯ ಸಾಹಿತಿಗಳಾದ ಇವರು ನವ್ಯ ಸಾಹಿತ್ಯದ ಕೆಲವು ಲಕ್ಷಣಗಳಾದ ಪ್ರತಿಮೆ, ತಂತ್ರ, ಪ್ರಗತಿಪರ ಚಿಂತನೆ, ವ್ಯಕ್ತಿತ್ವ ನಿಲುವು ಮಾನಸಿಕ ತೊಳಲಾಟಗಳನ್ನು ಪಾತ್ರಗಳಲ್ಲಿ ತರುವಂತಹ ಪ್ರಯತ್ನ ಮಾಡಿದ್ದಾರೆ. ಈ ಎರಡು ಕೃತಿಗಳಲ್ಲಿ ಅನೇಕ ಸಾಮ್ಯತೆಗಳು ಕಂಡುಬರುತ್ತವೆ. ಹಾಗೂ ವಿರುದ್ಧವಾದ ಮನೋಧೋರಣೆಯ ಚಿತ್ರಣಗಳನ್ನು ಕಾಣಬಹುದಾಗಿದೆ.

ಎರಡು ಕಾದಂಬರಿಯ ಲೇಖಕರು ಒಂದು ವರ್ಷದ ಅಂತರದಲ್ಲಿ ಜನಿಸಿದರೆ ಅವರ ಕೃತಿಗಳು 1965ರಲ್ಲಿ ಪ್ರಕಟವಾದವು. ಎರಡು ಕೃತಿಗಳ ಪ್ರಕಾಶರು ಧಾರವಾಡದವರು (ಮನೋಹರ ಗ್ರಂಥಮಾಲೆ ಮತ್ತು ಸಾಹಿತ್ಯ ಭಂಡಾರ). ಈ ಕೃತಿಗಳನ್ನ ರಚಿಸುವಾಗ ಇಬ್ಬರು ಲೇಖಕರು ಕರ್ನಾಟಕದಿಂದ ಹೊರಗೆ ಇದ್ದರು. ಅನಂತಮೂರ್ತಿಯವರು ಇಂಗ್ಲೇಂಡಿನಲ್ಲಿ ಹಾಗೂ ಭೈರಪ್ಪನವರು ಗುಜಾರಾತಿನಲ್ಲಿ ಇದ್ದರು. ಎರಡು ಕೃತಿಗಳು ಪ್ರಕಟವಾಗಿ ಜನಪ್ರಿಯತೆ ಕಂಡರು ಎರಡು ಕಾದಂಬರಿಗಳು ಚಲನಚಿತ್ರಗಳಾಗಿವೆ. ಎರಡು ಕಾದಂಬರಿಗಳ ವಸ್ತು ಒಂದೇ ಪರಂಪರಾಗತ ಸನಾತನ ಸಂಸ್ಕೃತಿಯ ಹಾಗೂ ಮೌಲ್ಯಗಳ ಪೊಳ್ಳುತನ ಕಂಡುಬರುತ್ತವೆ. ಸಂಸ್ಕಾರದಲ್ಲಿ ಆಚಾರ್ಯರು ಕೃತಿಯ ಕೊನೆಗೆ ತಮ್ಮ ಬ್ರಾಹ್ಮಣತ್ವ ತಿರಸ್ಕರಿಸಿ ಹೊಸ ಬದುಕಿಗೆ ಕಾಯುತ ಕುಳಿತರೆ, ವಂಶವೃಕ್ಷದಲ್ಲಿ ಶ್ರೋತ್ರಿಯವರು ಕೊನೆಯಲ್ಲಿ ತಾವು ತಮ್ಮ ಕುಲಕ್ಕೆ ಹುಟ್ಟಿದವರೇ ಅಲ್ಲವೆಂದು ತಿಳಿದು ಎಲ್ಲವನ್ನ ತ್ಯಜಿಸಿ ದೂರ ಹೊರಟು ಹೋಗುತ್ತಾರೆ. ಆಚಾರ್ಯ ಮತ್ತು ಶ್ರೋತ್ರಿಯವರ ಪತ್ನಿಯ ಹೆಸರು ಭಾಗೀರಥಿ ಮತ್ತು ಇಬ್ಬರು ಪತ್ನಿಯರು ತಮ್ಮ ತೀವ್ರ ಅನಾರೋಗ್ಯದ ಕಾರಣದಿಂದ ತಮ್ಮ ಪತಿಗಳಿಗೆ ಲೈಂಗಿಕ ಸುಖವನ್ನ ಕೊಡಲು ಅಶಕ್ತರಾಗಿರುವುದನ್ನು ಕಾಣಬಹುದು.

ಎರಡು ಕಾದಂಬರಿಗಳು ಸಾವಿನ ಸುದ್ದಿಯೊಂದಿಗೆ ಪ್ರಾರಂಭವಾಗುತ್ತವೆ. ಸಂಸ್ಕಾರ ಕಾದಂಬರಿಯ ಪ್ರಾಣೇಶಾಚಾರ್ಯ ಮತ್ತು ವಂಶವೃಕ್ಷ ಕಾದಂಬರಿಯ ಶ್ರೀನಿವಾಸ ಶ್ರೋತ್ರಿಯವರ ಪಾತ್ರಗಳಲ್ಲಿ ಸಾಮ್ಯತೆ ಕಂಡುಬಂದರು ಕೆಲವು ವಿರುದ್ಧವಾದ ಮನೋಭಾವ ಕಾಣಬಹುದು. ಇಬ್ಬರು ಸನಾತನ ಧರ್ಮದ ನಂಬಿಕೆಗಳನ್ನು ಆಚಾರಣೆಗಳನ್ನು ನಂಬಿಕೊಂಡು ಬರುವ ಪಾತ್ರಗಳಾಗಿವೆ. ಸಂಸ್ಕಾರ ಕಾದಂಬರಿಯಲ್ಲಿ ಪ್ರಾಣೇಶಾಚಾರ್ಯ ದಿನನಿತ್ಯ ಸ್ನಾನ, ಪೂಜೆ, ಸಂಧ್ಯಾವಂದನೆ, ಅಡಿಗೆ, ಹೆಂಡತಿಗೆ ಮದ್ದು ಕೊಡುವುದು ಮತ್ತೆ ಹೊಳೆದಾಟಿ ಹೋಗಿ ಗುಡಿಯ ಮಾರುತಿಯ ಪೂಜೆ, ಊಟವಾದ ಮೇಲೆ ಅಗ್ರಹಾರ ಬ್ರಾಹ್ಮಣರಿಗೆ ಮನೆಯ ಪಡಶಾಲೆಯಲ್ಲಿ ಪ್ರತಿದಿನ ಪುರಾಣ ಪುಣ್ಯಕಥೆಗಳ ವಾಚನ ಮತ್ತೆ ಸಂಜೆ ಸ್ನಾನ, ಸಂಧ್ಯಾವಂದನೆ, ಪೂಜೆ, ಹೆಂಡತಿಗೆ ಗಂಜಿ, ಮದ್ದು, ಅಡಿಗೆ ಊಟ ಮತ್ತೆ ಜಗುಲಿಯಲ್ಲಿ ಬಂದು ಕುಳಿತ ಬ್ರಾಹ್ಮಣರಿಗೆ ಪ್ರವಚನ ಮಾಡುವುದು.

ವಂಶವೃಕ್ಷ ಕಾದಂಬರಿಯಲ್ಲೂ ಪೂರ್ವಿಕರು ಕಟ್ಟಿಸಿದ್ದ ಮಹಡಿಯ ಮೇಲಿದ್ದ ಬಂದು ಕೋಣೆಯಲ್ಲಿ ಅವರ ಗ್ರಂಥಾಲಯ, ಅದರ ತುಂಬ ಓಲೆಗರಿಗಳು, ಅಚ್ಚಾದ ಗ್ರಂಥಗಳು ಮತ್ತು ಅವರೇ ಸ್ವತಃ ಕೈಬರಹದ ಪ್ರತಿಮಾಡಿದ ಕೆಲವು ಪುಸ್ತಕಗಳು ಬರೆಯುವ ಲೇಖನಿ, ಕಿಟಕಿ ಹತ್ತಿರ ಬಂದು ಗೋಡೆಗೆ ಒರಗಿ ಕೂರುವಂತೆ ಒಂದು ದೊಡ್ಡ ಹುಲಿಯ ಚರ್ಮ ಹಾಸಿ ಅದರ ಮೇಲೆ ಒರಗುವ ದಿಂಬನ್ನು ಇಟ್ಟಿದೆ ಎದುರಿಗೆ ಮಡಿಸಲು ಬರುವಂತಹ ವ್ಯಾಸಪೀಠ. ಸುಮಾರು ಮೂವತ್ತು ವರ್ಷಗಳಿಗೂ ಮಿಕ್ಕಿ ಈ ಕೋಣೆಯಲ್ಲೇ ಕುಳಿತು ವೇದ, ಶಾಸ್ತ್ರ, ಪುರಾಣ, ಧರ್ಮಶಾಸ್ತ್ರ, ಆಯುರ್ವೇದಗಳ ಅಧ್ಯಯನ ಮಾಡುತ್ತಿದ್ದಾರೆ. ಹೀಗೆ ಈ ಇಬ್ಬರೂ ಬ್ರಾಹ್ಮಣ ಧರ್ಮದ ನಂಬಿಕೆಯನ್ನು ಹೊಂದಿದ್ದರು ಈ ಇಬ್ಬರ ಹೆಂಡತಿಯರ ಅನಾರೋಗ್ಯದಿಂದ ಒಳಲುತ್ತಿದ್ದು ಲೈಂಗಿಕ ಸುಖವನ್ನು ತಮ್ಮ ಗಂಡಂದರಿಗೆ ನೀಡುವಲ್ಲಿ ಅಶಕ್ತರಾಗಿದ್ದರು.

ವಂಶವೃಕ್ಷದಲ್ಲಿನ ಪ್ರಾಣೇಶಾಚಾರ್ಯನ ಹೆಂಡತಿ ಭಾಗೀರತಿ ತನ್ನ ಗಂಡನಿಗೆ ತನ್ನನ್ನು ಕಟ್ಟಿಕೊಂಡು ನೀವು ಯಾವ ಸುಖ ಕಂಡಿರಿ ಇನ್ನೊಂದು ಮದುವೆ ಮಾಡಿಕೊಳ್ಳಿ ಕಾಶಿಗೆ ಹೋಗಿ ಸಂಸ್ಕೃತ ಓದಿ ಬಂದ ನಿಮಗೆ ಹೆಣ್ಣನ್ನು ಧಾರೆ ಎರೆದುಕೊಡುವುದು ಯಾವ ತಂದೆಗೆ ತಾನೇ ಇಷ್ಟವಿಲ್ಲ ಮದುವೆಯಾಗಿ ಎನ್ನುವಳು. ಹಾಗೇಯೆ ವಂಶವೃಕ್ಷದಲ್ಲಿ ಶ್ರೀನಿವಾಸಶ್ರೋತ್ರಿಯವರ ಹೆಂಡತಿ ಭಾಗೀರತಮ್ಮ ತಾನು ಇನ್ನು ಅವರಿಗೆ ದೇಹ ಸುಖ ಕೊಡಲು ಸಾಧ್ಯವಿಲ್ಲವೆಂದು ಡಾಕ್ಟರ್‌ರಿಂದ ತಿಳಿದು ತನ್ನ ತಂಗಿಯನ್ನು ಮದುವೆ ಮಾಡುವ ನಿರ್ಧಾರ ಮಾಡುವುದು ಅವರು ಒಪ್ಪದಿದ್ದಾಗ ಮನೆಯ ಆಳೂ ಲಕ್ಷ್ಮಿಯನ್ನು ಅವರ ಜೊತೆ ನಡೆದಿಕೊ ಅವರಿಗೆ ದೇಹ ಸುಖ ನೀಡು ಎಂದು ಹೇಳುವುದರ ಮೂಲಕ ವಿಶಾಲ ಮನಸ್ಸಿನ ಪಾತ್ರವಾಗಿ ಕಂಡುಬರುತ್ತಾಳೆ. ಈ ಎರಡು ಪಾತ್ರಗಳಲ್ಲಿನ ಮನಸ್ಥಿತಿ ಸಮಾನವಾಗಿ ಕಂಡುಬರುತ್ತದೆ.

ಎರಡು ಕಾದಂಬರಿಗಳಲ್ಲಿ ಬ್ರಾಹ್ಮಣ ಸಮಾಜದ ಆಚರಣೆಗಳು ನಂಬಿಕೆಗಳು ವ್ಯಕ್ತವಾಗಿವೆ. ನಾರಣಪ್ಪನ ಶವಸಂಸ್ಕಾರ ಮಾಡದೇ ಇರುವುದೇ ಅಗ್ರಹಾರದ ಜನರು ರೋಗದಿಂದ ಸಾಯಲು ಕಾರಣ ಎಂದು ತಿಳಿಯುವುದು ಮತ್ತು ಕಾತ್ಯಾಯಿನಿ ತನ್ನ ಮಗನನ್ನ ಬಿಟ್ಟು ರಾಜನ ಜೊತೆ ಎರಡನೇ ಮದುವೆಯಾಗುವುದು ಅವನಿಂದ ಅವಳು ಗರ್ಭಿಣಿಯಾಗಿ ಹೆರಿಗೆಗೆ ಮುಂಚೆಯೇ ಮೂರು ಬಾರಿ ಗರ್ಭಪಾತವಗುವುದು ಈ ಸನ್ನಿವೇಶಗಳು ಧರ್ಮ, ನಂಬಿಕೆ, ಸಂಪ್ರದಾಯದ ಭೀತಿಯನ್ನು ಎಲ್ಲರಲ್ಲಿಯೂ ಕಾಡುವಂತೆ ಚಿತ್ರಿತವಾಗಿವೆ.

ನಾರಣಪ್ಪನ ಶವ ಸಂಸ್ಕಾರ ಮಾಡುವಲ್ಲಿ ಚಂದ್ರಿ, ಮುಸಲ್ಮಾನ ಗೆಳೆಯನ ಜೊತೆ ವಿಧಿ ವಿಧಾನಗಳ ಮೂಲಕ ಸಂಸ್ಕಾರ ಮಾಡುವುದು ಸಂಸ್ಕಾರ ಕಾದಂಬರಿಯಲ್ಲಿ ವ್ಯಕ್ತವಾದಂತೆ, ವಂಶವೃಕ್ಷದಲ್ಲಿ ಸಂಸ್ಕಾರ ಪವಿತ್ರ ಕೆಲಸವೆಂದು ಚೀನಿಗೆ ತಿಳಿಸಿ ಅವನ ಕೈಯಿಂದ ಕಾತ್ಯಾಯಿನಿಯ ಸಂಸ್ಕಾರ ಮಾಡಿಸುವ ಶ್ರೋತ್ರಿಯವರು ಕೂಡ ಸನಾತನ ನಂಬಿಕೆಯ ದ್ಯೋತಕವಾಗಿ ಕಂಡು ಬರುತ್ತಾರೆ. ನಾರಣಪ್ಪ ಸತ್ತ ಸುದ್ದಿ ಕಾಡುಗಿಚ್ಚಿನಂತೆ ಇಡೀ ಅಗ್ರಹಾರದವರಿಗೆಲ್ಲ ತಿಳಿದಾಗ ಅವರಲ್ಲಿ ಉಂಟಾದ ಸಂದಿಗ್ಧ ಪರಿಸ್ಥಿತಿ ಬ್ರಾಹ್ಮಣತ್ವದ ನಂಬಿಕೆಗೆ ಸಾಕ್ಷಿಯಾಗಿದೆ. ನಾರಣಪ್ಪ ಬ್ರಾಹ್ಮಣತ್ವವನ್ನು ಬಿಟ್ಟರು ಬ್ರಾಹ್ಮಣ್ಯ ಆತನನ್ನು

ಬಿಟ್ಟಿರಲಿಲ್ಲ. ಅವನನ್ನು ಶಾಸ್ತ್ರೋಕ್ತವಾಗಿ ಬಹಿಷ್ಕಾರ ಹಾಕದೆ ಇದುದ್ದರಿಂದ ಆತ ಬ್ರಾಹ್ಮಣನಾಗಿಯೇ ಉಳಿದಿರುವುದು, ಅವನ ಶವಸಂಸ್ಕಾರ ಮಾಡುವುದು ಯಾರೆಂಬುವುದಾಗಿ ನಡೆದ ಚರ್ಚೆಯಲ್ಲಿ ಅಗ್ರಹಾರದ ಬ್ರಾಹ್ಮಣರಲ್ಲಿ ಇರುವ ನಂಬಿಕೆ, ಸಂಪ್ರಾದಯ, ಧರ್ಮ ಸೂಕ್ಷ್ಮ ಅಂಶಗಳು ವ್ಯಕ್ತವಾಗುತ್ತವೆ.

ಸಂಸ್ಕಾರದಲ್ಲಿ ನಾರಣಪ್ಪ, ಮಾಹಾಬಲ, ಪ್ರಾಣೇಶಾಚಾರ್ಯರ ಪಾತ್ರದ ಮೂಲಕ ವೈಚಾರಿಕ ಮನೋಭಾವವನ್ನು ಲೇಖಕರು ವ್ಯಕ್ತಪಡಿಸಿದ್ದಾರೆ. ನಾರಣಪ್ಪ–ಪ್ರಾಣೇಶಾಚಾರ್ಯನ ನಡುವಿನ ಸಂಭಾಷಣೆಯಲ್ಲಿ ಪ್ರಾಣೇಶಾಚಾರ್ಯರಿಗೆ ನಾರಣಪ್ಪ ಹೇಳಿದ ಮಾತುಗಳಲ್ಲಿ ಬ್ರಾಹಣರಲ್ಲಿನ ಪೊಳ್ಳು ಸಂಪ್ರದಾಯ, ಆಚರಣೆಗಳಿಗೆ ಅರ್ಥವೇ ಇಲ್ಲ. ಅವುಗಳನ್ನು ಪಾಲಿಸುವುದರಿಂದ ಏನೂ ಪ್ರಯೋಜನವಿಲ್ಲ ಎಂಬಂತ ಮಾತುಗಳು, ಮಾನವ ಸಹಜ ಬಯಕೆ, ಆಸೆ, ಕಾಮನೆಗಳ ಬಗ್ಗೆ ನಾರಣಪ್ಪ ಹೇಳುವ ಮಾತುಗಳು ಪ್ರಗತಿ ಪರ ವೈಚಾರಿಕ ಮನೋಭಾವ ವ್ಯಕ್ತವಾಗಿರುವುದನ್ನು ಕಾಣಬಹುದು. ಪ್ರಾಣೇಶಾಚಾರ್ಯ ಚಂದ್ರಿಯ ಆಕಸ್ಮಿಕ ಸಂಗಮದಿಂದ ಪ್ರಾಣೇಶಾಚಾರ್ಯರಲ್ಲಿ ಆದ ಬದಲಾವಣೆ, ತನ್ನ ಹೆಂಡತಿ ಸಂಸ್ಕಾರ ಮುಗಿಸಿ ಚಂದ್ರಿಯ ಜೊತೆಯಲ್ಲಿ ಬಾಳ್ವೆ ಮಾಡಬೇಕೆನ್ನುವ ಮನಸ್ಥಿತಿಗೆ ಒಳಗಾಗಿ ಮೇಳಿಗೆ ಜಾತ್ರೆ ಪ್ರಯಾಣ, ಅಲ್ಲಿ ಮಾಲೇರ ಪುಟ್ಟನ ಸಹವಾಸ ಅವನು ತೋರಿಸುವ ಹೊಸ ಜಗತ್ತು. ಪದ್ಮಾವತಿಯ ಪರಿಚಯ ಹೋಟಲಿನಲ್ಲಿ ಕಾಫಿ ಕುಡಿಯುವುದು, ಸೂತಕ ಇದ್ದರೂ ದೇವಸ್ಥಾನದಲ್ಲಿ ಊಟ ಮಾಡುವುದು ಇವೆಲ್ಲ ಪ್ರಾಣೇಶಾಚಾರ್ಯರಲ್ಲಿ ಆದ ಬದಲಾವಣೆಯೊಂದಿಗೆ ವೈಚಾರಿಕತೆಯ ನಿಲುವು ವ್ಯಕ್ತವಾಗುವಂತೆ ಲೇಖಕರು ಪ್ರಾಣೇಶಾಚಾರ್ಯರ ಮೂಲಕ ಚಿತ್ರಿಸಿದ್ದಾರೆ.

ವಂಶವೃಕ್ಷದಲ್ಲಿ ಶ್ರೀನಿವಾಸಶ್ರೋತ್ರಿ ತನ್ನ ಮಗ ಸತ್ತರು ಕಾತ್ಯಾಯಿನಿಗೆ ಬ್ರಾಹ್ಮಣ ನಂಬಿಕೆಯ ಪ್ರಕಾರ ಯವುದೇ ರೀತಿಯಲ್ಲೂ ವಿಧವೆಯ ಭಾವ ಮೂಡುವಂತಹ ಕಾರ್ಯಗಳನ್ನು ಮನಸ್ಸಿನಲ್ಲಿ ಬಾದಿಸದಂತೆ ಅವಳಿಗೆ ಯಾವ ರೀತಿಯ ಸಂಪ್ರದಾಯದ ವಿಧಿಗಳನ್ನು ವಿಧಿಸುವುದಿಲ್ಲ, ಗಂಡ ಸತ್ತರು ಹೂ ಮೂಡಿಯುವಂತೆಯೇ ಹೇಳುವುದು. ಕಾತ್ಯಾಯಿನಿಯನ್ನು ಕಾಲೇಜಿಗೆ ಸೇರುವಂತೆ ಒಪ್ಪಿಗೆ ನೀಡುವುದು. ಕಾತ್ಯಾಯಿನಿ ಕಾಲೇಜಿಗೆ ಸೇರಿಕೊಂಡ ಮೇಲೆ ರಾಜರಾಯನ ಮೇಲಿನ ಪ್ರೀತಿ, ಅವನನ್ನು ಮದುವೆ ಮಾಡಿಕೊಳ್ಳುತ್ತೇನೆಂದು ಮಾವನವರಿಗೆ ಹೇಳುವ ದಿಟ್ಟ ನಿರ್ಧಾರ. ರಾಜರಾಯನ ಜೊತೆ ಸಂಬಂಧ ಇಲ್ಲೂ ಕೂಡ ಸಂಪ್ರದಾಯವನ್ನು ಮೀರಿ ವೈಚಾರಿಕ ನಿಲುವಿಗೆ ಆಧುನಿಕ ಮನಸ್ಥಿತಿಯ ಪ್ರತೀಕವಾಗಿ ನಿಲ್ಲುವಂತೆ ಭೈರಪ್ಪನವರು ಚಿತ್ರಿಸಿದ್ದಾರೆ.

ರಾಜರಾಯ ವಿಧವೆಯಾದ ಕಾತ್ಯಾಯಿನಿಯನ್ನು ಮದುವೆಯಾಗಿ ಆಕೆಯ ಬದುಕಿಗೆ ಒಂದು ಅರ್ಥಕೊಡುವ ಜವಬ್ದಾರಿಯುತ ಆದರ್ಶ ವ್ಯಕ್ತಿಯಾಗಿ ಕಂಡುಬರುತ್ತಾನೆ. ಸದಾಶಿವರಾಯ ತನ್ನನ್ನು ಬಿಟ್ಟು ಕರುಣಾರತ್ನೆಯನ್ನು ಮದುವೆಯಾದಾಗ ಮೊದಲು ವಿರೋಧಿಸಿದರು ಅನಂತರ ಗಂಡನ ಜೊತೆಗೆ ಆಕೆಯನ್ನು ಒಪ್ಪಿಕೊಳ್ಳುವಂತಹ ಆದರ್ಶ ಮಡದಿಯಾಗಿಯೂ ನಾಗಲಕ್ಷ್ಮಿಯೂ ಕಂಡುಬರುತ್ತಾಳೆ. ಲಕ್ಷ್ಮಿಯು ಶ್ರೋತ್ರಿಯ ಹೆಂಡತಿ ಭಾಗೀರತಮ್ಮ ಮಾತಿನಂತೆ ಆತನನ್ನು ಒಪ್ಪಿಕೊಂಡು ಅವನಿಗೆ ದೇಹಸುಖ ನೀಡುವಂತ ಮನೋಭಾವ ವ್ಯಕ್ತಪಡಿಸುವುದು ಮಾನವನ ಸಹಜ ಮಾನಸಿಕ ಹಂಬಲ

ವ್ಯಕ್ತವಾಗದೆ. ಧರ್ಮಕ್ಕಿಂತಲೂ ಮುಖ್ಯವಾದುದು ಮಾನವೀಯತೆ, ನಂಬಿಕೆಗಿಂತಲೂ ಮುಖ್ಯವಾಗಿರುವುದು ದೈಹಿಕ ಸಹಜವಾದ ಹಂಬಲ. ಇವುಗಳ ಮುಖಾಮುಖಿ ಎರಡು ಕಾದಂಬರಿಗಳಲ್ಲೂ ಮುಖ್ಯವಾಗಿ ಕಂಡು ಬರುತ್ತದೆ.

ಕಾದಂಬರಿಕಾರು ತಮ್ಮ ಕಾದಂಬರಿಗಳ ಮೂಲಕ ಭಾರತೀಯ ಸಂಪ್ರದಾಯದ ನಂಬಿಕೆ ಆಚರಣೆ ಸಂಪ್ರದಾಯದ ಕಟ್ಟುನಿಟ್ಟಿನ ವ್ಯವಸ್ಥೆಯನ್ನು ತೋರಿಸುತ್ತ ಅವುಗಳಲ್ಲಿ ಕೆಲವು ಇಡೀ ಸಮಾಜದ ಮೇಲೆ ಯಾವ ರೀತಿ ನಿಯಂತ್ರಣ ಸಾಧಿಸಿವೆ ಆದರೆ ಅವೆಲ್ಲವು ಕೃತಕ, ಪೊಳ್ಳು ಎಂಬಂತಹ ನಿಲುವನ್ನು ಸಾಧಿಸಿ ತೋರಿಸುವಂತಹ ಮನಃ ಶಾಸ್ತ್ರೀಯ ಹಿನ್ನೆಲೆಯಲ್ಲಿ ವ್ಯಕ್ತಪಡಿಸುವಂತೆ ಪಾತ್ರಗಳ ಮೂಲಕ ಚಿತ್ರಿಸುವ ಪ್ರಯತ್ನ ಮಾಡಿದ್ದಾರೆ. ಸಂಸ್ಕಾರದಲ್ಲಿ ಚಂದ್ರಿಯ, ಬೆಳ್ಳಿಯ, ಪದ್ಮಾವತಿಯ ಪಾತ್ರಗಳ ಮೂಲಕ ಕೆಳವರ್ಗದವರ ಸ್ಥಿತಿಗತಿ ಅವರ ಮನೋಭಾವ, ದೈಹಿಕ ಆಕರ್ಷಣೆಗಳ, ಮಾನವ ಸಹಜ ಬಯಕೆಗಳನ್ನು ತೆರೆದು ತೋರಿಸಿದ್ದಾನೆ. ನಾರಣಪ್ಪ, ಮಹಾಬಲ, ಪ್ರಾಣೇಶಾಚಾರ್ಯ ಇವರ ಮೂಲಕ ಧರ್ಮದ ಸೂಕ್ಷ್ಮತೆ ವಿರುದ್ಧ ಮನೋಭಾವದ ದ್ವಂದ್ವತೆ ನಿವಾರಣೆಯನ್ನು ವ್ಯಕ್ತಪಡಿಸಿದರೆ.

ವಂಶವೃಕ್ಷದಲ್ಲಿ ಶ್ರೀನಿವಾಸಶ್ರೋತ್ರಿಗೆ ತನ್ನ ಕುಲದ ಬಗ್ಗೆ ಲಕ್ಷ್ಮಿಯಿಂದ ತಿಳಿದು ತಾನು ಕೈಗೊಂಡ ನಿರ್ಧಾರ, ರಾಜರಾಯನ ಆದರ್ಶ ವ್ಯಕ್ತಿತ್ವ, ಕಾತ್ಯಾಯಿನಿಯ ಸಂಪ್ರದಾಯ ಮತ್ತು ನಂಬಿಕೆಗಳನ್ನು ಮೀರಿ ನಡೆದುಕೊಳ್ಳುವ ಹಾಗೂ ಸಹಜ ವಾಸ್ತವ ಚಿತ್ರಣ, ಇವೆಲ್ಲವು ಧರ್ಮ ಮತ್ತು ವೈಚಾರಿಕ ಪ್ರಜ್ಞೆಗಳ ನಡುವೆ ಮುಖಾಮುಖಿಯಗುವ ಸನ್ನಿವೇಶಗಳಾಗಿ ಕಾದಂಬರಿಯಲ್ಲಿ ಕಂಡುಬರುತ್ತವೆ. ಈ ಎರಡು ಕಾದಂಬರಿಗಳು ವಿಚಾರ ಗರ್ಭತವಾಗಲ್ಲದೆ ಎರಡರಲ್ಲೂ ಜೀವನಯಾತ್ರೆಯ ಒಂದೊಂದು ಉತ್ತರ ಮುಖಿಯೂ ಇದೆ. ತನ್ನ ಕೇಂದ್ರ ಸಂದೇಶವನ್ನು ಅಡಕವಾಗಿ ಮಂಡಿಸುವ ಸಂಸ್ಕಾರ ಸಾಮಾನ್ಯ ಮನುಷ್ಯರನ್ನು, ಘಟನೆಗಳನ್ನು, ಬೀಜಾಕ್ಷರಗಳನ್ನಾಗಿ ಬಳಸಿಕೊಂಡು ಮಾನವನ ಜೀವನ ಮೌಲ್ಯಗಳನ್ನು ಪ್ರಸ್ತಾಪಿಸುತ್ತದೆ. ಅಗ್ರಹಾರ ಒಂದರಲ್ಲಿ ಹಲವು ದಶಕಗಳಿಂದ ಪರಾಂಪರಾಗತವಾದ ಮೌಲ್ಯಗಳನ್ನು ನೆಚ್ಚಿಕೊಂಡು ಬಿಗಿಯಾಗಿ ಪರಸ್ಪರ ಅವಲಂಬಿಸಿಕೊಂಡ ಬದುಕುತ್ತಿದ್ದ ಗ್ರಾಮೀಣ ಬ್ರಾಹ್ಮಣ ಸಮಾಜ! ಅದರ ಹಿರಿಯ ಪ್ರಜ್ಞಾ-ಸ್ವಾತಿಕ ಎನಿಸಿದ ಪ್ರಾಣೇಶಾಚಾರ್ಯನಿಗೆ ಆತ ನಂಬಿ ಬದುಕುವ ಮೌಲ್ಯಗಳ ಪುಸ್ತಕದಲ್ಲಿ ಪರಿಹಾರವಿಲ್ಲದೆ. ಒಂದು ಸಮಸ್ಯೆ ಆಕಸ್ಮಿಕವಾಗಿ ಎದುರಾಗುವುದರ ಮುಖಾಂತರ ಆತ ಅರ್ಥಪೂರ್ಣ ಬದುಕನ್ನ ಅರಸುವ ಆಧ್ಯಾತ್ಮಿಕ ತಳಮಳದ ಕಥೆ. ಮದುವೆಯಾದಾಗಿನಿಂದಲೂ ರೋಗಿಷ್ಠಳಾಗಿ ಹಾಸಿಗೆ ಹಿಡಿದಿರುವ ಪತ್ನಿ, ತನ್ನ ನೈತಿಕ ಬ್ರಹ್ಮಚರ್ಯದ ಬದುಕನ್ನು ಒರೆಗಿಡಲೂ ಪುಟವಿಡಲೂ ಭಗವಂತನು ವಿಧಿಸಿದ ವ್ರತ ಎಂದು ನಂಬಿ ಆಕೆಯ ಚಿಕಿತ್ಸೆ ಶುಶ್ರೂಸೆ ಮಾಡುತ್ತಿರುವುದು ಆತನ ಸಾಂಸಾರಿಕ ಜೀವನದ ರೂಪ. ಅದೇ ಅಗ್ರಹಾರದಲ್ಲಿ ಮಾಂಸ ತಿನ್ನುತ್ತ, ಮದ್ಯ ಕುಡಿಯುತ್ತ ತುರುಕ ಮಿತ್ರರ ಜೊತೆಗೂಡಿ ದೇವಸ್ಥಾನದ ಕಲ್ಯಾಣಿಯಲ್ಲಿ ಮೀನು ಹಿಡಿಯುತ್ತ ಇಟ್ಟಿಕೊಂಡ ಕೀಳು ಜಾತಿಯ ಹೆಂಗಸೊಬ್ಬಳೊಡನೆ. ವಿಲಾಸಮಯ ಜೀವನ ನಡೆಸುತ್ತ ಬ್ರಾಹ್ಮಣ ಸಮಾಜದ ಎಲ್ಲಾ ಪರಂಪರಾಗತ ಮೌಲ್ಯಗಳನ್ನು ದಿಕ್ಕರಿಸಿ ಸ್ವತಂತ್ರ ಸಾಕಾರ ರೂಪವಾಗಿ ನಾರಣಪ್ಪ ಬ್ರಾಹ್ಮಣರಿಗೆ ಏನೂ

ಮಾಡಲೂ ತೋರೆದ ಸಮಸ್ಯೆಯಾಗಿ ಅದೇ ಅಗ್ರಹಾರದಲ್ಲಿ ಐಶರಾಮವಾಗಿ ಬದುಕುತ್ತಿದ್ದು ಜಾತಿಗೆಟ್ಟ ಬ್ರಾಹ್ಮಣ ನಾರಣಪ್ಪ ಸತ್ತು ಬ್ರಾಹ್ಮಣ ಸಮಾಜಕ್ಕೆ ಸಾಮೂಹಿಕವಾಗಿಯೂ, ಪ್ರಾಣೇಶಾಚಾರ್ಯರಿಗೆ ವೈಯಕ್ತಿಕವಾಗಿಯೂ ಸಮಸ್ಯೆ ಒಡ್ಡುತ್ತಾನೆ. ಶವ ಸಂಸ್ಕಾರವಾಗಿ ಸಂದಿಗ್ಧತೆ ಎಲ್ಲಾ ಬ್ರಾಹ್ಮಣರಲ್ಲೂ ಆತನನ್ನು ಬ್ರಾಹ್ಮಣನಂತೆ ಸಂಸ್ಕಾರ ಮಾಡಬೇಕೆ? ಬೇಡವೇ? ಎಂಬಂತಹ ಸಮಸ್ಯೆ ಎದುರಾಗಿ ಹಾಗಾದರೆ ಯಾರು ಮಾಡುವರೆಂಬ ಚಿಂತೆಯಲ್ಲಿದ್ದ ಅವರು ಪ್ರಾಣೇಶಾಚಾರ್ಯನನ್ನು ಪರಿಹಾರ ಕೇಳಲು ಪಂಡಿತನಾದ ಆತ ತನಗೆ ಗೊತ್ತಿದ್ದ ಎಲ್ಲಾ ಶಾಸ್ತ್ರಗಳ ಕಡತಗಳನ್ನು ಮಗುಚಿ ಹಾಕುತ್ತಾನೆ. ಆದರೆ ಸಮಸ್ಯೆಗೆ ಉತ್ತರ ಸಿಕ್ಕಲಿಲ್ಲ ಮೂರು ದಿನ ಕಳೆದಂತೆ ಇತ್ತ ಬ್ರಾಹ್ಮಣರಿಗೆ ಹಸಿವು, ನೀರಡಿಕೆ, ಅತ್ತ ಶವದ ಕೊಳೆತ ವಾಸನೆ ತೀವ್ರವಾಗುತ್ತದೆ ಅಗ್ರಹಾರದ ತುಂಬೆಲ್ಲ ಪ್ಲೇಗು ತಾಂಡವಾಡುತ್ತಿದೆ. ಸತ್ತ ಶವ ಸಂಸ್ಕರವಾಗಿ ಮೈಲಿಗೆ ಕಳೆಯುವವರೆಗೂ ಊಟ ಹೇಗೆ ಮಾಡುವುದು? ಸಂಸ್ಕಾರ ಆಗುವವರೆಗೂ ಬದುಕು ಸ್ತಬ್ಧ.

ಚಂದ್ರಿಯ ಮಾತಿನಂತೆ ಅಗ್ರಹಾರದ ಬ್ರಾಹ್ಮಣರಿಗೆ ತಿಳಿಯದಂತೆ ನಾರಣಪ್ಪನ ಮುಸಲ್ಮಾನ ಮಿತ್ರರು ರಾತ್ರಿ ಗುಟ್ಟಾಗಿ ಒಯ್ದು ಯಾವ ಶಾಸ್ತ್ರವೂ, ಸಾಂಗವೂ ಇಲ್ಲದೆ ಸುಟ್ಟ ಹಾಕಿದರು. ಆದ್ದರಿಂದ ಬ್ರಾಹ್ಮಣರ ಬರಡು ಚರ್ಚೆ ಅವರ ಮಟ್ಟಿಗೆ ಮಾತ್ರ ಉಳಿದಿದ್ದು ವಾಸ್ತವಿಕವಾಗಿ ಇಲ್ಲದ ಸಮಸ್ಯೆಯನ್ನು ಕುರಿತು ಶೂನ್ಯದಲ್ಲಿ ನಡೆಯುತ್ತಿರುತ್ತದೆ. ಕಡೆಗೆ ತನ್ನ ಪಾಂಡಿತ್ಯ ಮಾರ್ಗವನ್ನು ಬದಿಗಿಟ್ಟು ಜಾನಪದ ಮಾರ್ಗದಿಂದ ಊರಿನ ಹನುಮದೇವರನ್ನು ಹೂವು ಕೇಳುವುದರ ಮುಖಾಂತರ ಮಾರ್ಗದರ್ಶನ ಪಡೆಯಲು ಹೋಗಿದ್ದ ಪ್ರಾಣೇಶಾಚಾರ್ಯ ದಾರಿಯಲ್ಲಿ ನಾರಣಪ್ಪನ ಸೂಳೆ ಚಂದ್ರಿಯನ್ನು ಸಂಧಿಸುತ್ತಾನೆ. ಹಲವು ವರ್ಷಗಳಿಂದಲೂ ಅದುಮಿಟ್ಟಿದ್ದ ಲೈಂಗಿಕ ಸಂಯಮದ ಕಟ್ಟೆ ಒಡೆದು, ಅವಳೊಡನೆ ಆತ ಅಲ್ಲೇ ಆಗಲೇ ಕೊಡುತ್ತಾನೆ ಹೀಗೆ ಆತನ ಅರಸಿಕೆ ಯಾವುದನ್ನು ಆತ ಅತ್ಯಂತ ಪಾಪವೆಂದು ಬಗೆದಿದ್ದನೋ ಅಂತ್ಯಕ್ರಿಯೆಯಲ್ಲಿ ಪರ್ಯವಸಾನವಾಗಿರುತ್ತದೆ. ಆದರೆ ಅನಂತಮೂರ್ತಿಯವರ ದೃಷ್ಟಿಯಲ್ಲಿ ಪ್ರಾಣೇಶಾಚಾರ್ಯನ ಪ್ರಜ್ಞಾಪೂರ್ಣ ಆಯ್ಕೆಯ ಹೊಸಹುಟ್ಟು ಆ ಕ್ಷಣದಿಂದಲೇ ಆರಂಭವಾಗುತ್ತದೆ. ಮನುವಿನಿಂದ ಸಾರ್ತ್ರೆವರೆಗಿನ ಒಂದು ಭಾರಿ ನೆಗೆತದ ಮುಖಾಂತರ ಎಂದು ಆಹಿತಾನಲ ಅಭಿಪ್ರಾಯ ಪಟ್ಟಿದ್ದಾರೆ.

ಈ ಎಲ್ಲಾ ಕಾಲದಲ್ಲಿ ಅಗ್ರಹಾರದಲ್ಲಿ ಪ್ಲೇಗು ಉಲ್ಬಣಿಸಿದೆ. ಪ್ರಾಣೇಶಾಚಾರ್ಯರ ಪತ್ನಿ ಸಾಯುತ್ತಾಳೆ ಅಗ್ರಹಾರದ ಬ್ರಾಹ್ಮಣಸಮಾಜದ ಮುಖಂಡತ್ವವನ್ನು ಪರಿತ್ಯಾಗ ಮಾಡಿ ಬ್ರಾಹ್ಮಣರಿಗೆ ತಮಗೆ ತೋರಿದಂತೆ ಮಾಡಲಿ ಎಂದು ಹೇಳಿ ಚಂದ್ರಿಯೊಡನೆ ಹೊಸ ಬಾಳು ಆರಂಭಿಸಲು ಆಚಾರ್ಯ ಹೊರಟು ಹೋಗುತ್ತಾನೆ. ಸತ್ತು ನಾರುತ್ತಿರುವ ಶವಸಂಸ್ಕಾರಕ್ಕೆ ಶಾಸ್ತ್ರಸಮ್ಮತವಾದ ಕ್ರಮ ಹುಡುಕುವ ವ್ಯರ್ಥ ಪ್ರಯತ್ನ ಕೈಬಿಟ್ಟು, ತೀವ್ರವಾದ ಒಳತೋಟಿ ಹಾಗೂ ಪ್ರಣದಾಯಿಯಾದ ಒಂದು ಕ್ರಿಯೆಯ ಮುಖಾಂತರ ಹೊಸ ಬದುಕನ್ನು ತನಗಾಗಿ ಅರಸಿಕೊಳ್ಳುತ್ತಾನೆ. ಹೀಗೆ ತನ್ನ ಇಡೀ ಭೂತಕಾಲದ ಸಂಸ್ಕಾರವನ್ನು ತಿರಸ್ಕರಿಸುವ ರೀತಿಯಲ್ಲಿ ಹೊಸ ಸಂಸ್ಕಾರ ಪಡೆಯುತ್ತಾನೆ. ಕಾದಂಬರಿಯ ವ್ಯಾಪ್ತಿಯನ್ನು ಅನಂತಮೂರ್ತಿಯವರು

ತುಂಬಾ ಕೌಶಲದಿಂದ ಬಳಸಿಕೊಂಡಿದ್ದಾರೆ. ಹೆಂಗಸರು, ಮಕ್ಕಳೂ, ಬ್ರಾಹ್ಮಣರು, ಶೂದ್ರರು, ಹರಿಜನ ಹುಡಿಗಿ, ಅವಳನ್ನು ಪ್ರೀತಿಸುವ ಬ್ರಾಹ್ಮಣ ಹುಡುಗ ಈ ಎಲ್ಲ ಪಾತ್ರಗಳು ನಿರ್ಧಿಷ್ಟ ರೂಪರೇಖೆ ಪಡೆದ ಜೀವಂತ ವ್ಯಕ್ತಿಗಳು.

ತಮ್ಮ ಇಡೀ ಪರಂಪರಾಗತ ಘನಪಾಂಡಿತ್ಯದ ಸಹಾಯದಿಂದ ಕೂಡ ಎಲ್ಲವನ್ನು ಬಿಟ್ಟು ಬದುಕುವ ಒಬ್ಬ ಸೊಕ್ಕಿನ ನಾರಣಪ್ಪನು ಸತ್ತು ನಿರ್ಮಿಸಿದ ಸವಾಲನ್ನು ಎದುರಿಸಲಾಗದ ಆಚಾರ್ಯನ ಧರ್ಮಸಂಕಟ ತನ್ನ ಸತ್ತ ಪ್ರೇಮಿಯ ಶಾಸ್ತ್ರ ಸಮ್ಮತ ಸಂಸ್ಕಾರ ಮತ್ತು ಸದ್ಗತಿಗಾಗಿ ತನ್ನ ಇಡೀ ಚಿನ್ನವನ್ನು ನೀಡಲು ತಯಾರಿರುವ ಸೂಳೆ ಚಂದ್ರಿಯ ಔದಾರ್ಯ, ಸತ್ತ ಸಂಬಂಧಿಯನ್ನು ಬಿಟ್ಟು ಚಿನ್ನದ ಹಕ್ಕಿಗಾಗಿ ಕಾದಾಡುವ ಬ್ರಾಹ್ಮಣ ಬಂಧುಗಳ ಕ್ಷದ್ರತನ. ಯುವಕನಾದ ಮಾಲೇರ ಪುಟ್ಟನ ಸರಳ ಜೀವನ ವೇದಾಂತ – ಇವು ಮನಸ್ಸನ್ನು ಸೆರೆಹಿಡಿಯುವ ಕಸುಬುದಾರಿ ಚಿತ್ರಣಗಳಾಗಿವೆ. ಇದೊಂದು ಸಂಪ್ರದಾಯ ಶಾಸ್ತ್ರಗಳನ್ನು ತಿಳಿಸುವ ಕಾದಂಬರಿಯಾದರೂ ಅದರ ಅಂತರಂಗದಿಂದ ಬೇರೊಂದು ಧ್ವನಿಯು ಹೊಮ್ಮುತ್ತದೆ. ಹೀಗೆ ಬ್ರಾಹ್ಮಣ್ಯದ ಜೀವಾಳ, ಅದರ ಹೊರಗಿನ ವೇಷ, ಭಾಷೆ, ಅದಲ್ಲದೆ ಅದರ ಸತ್ಯಶೋಧನೆ ಹಾಗೂ ಸತ್ಯ ಸ್ವೀಕಾರಕ್ಕೆ ಸಿದ್ಧತೆಯ ಸಾಧನವೇನು? ಎಂಬುದನ್ನು ಸಂಸ್ಕಾರ ಕಾದಂಬರಿ ತಿಳಿಸಿಕೊಡುತ್ತದೆ.

ವಂಶವೃಕ್ಷ ಸಂಸಾರದಷ್ಟು ಪರಿಪುಷ್ಟ ಕಾದಂಬರಿ ಅಲ್ಲವಾದರೂ ಮಾಮೂಲಿ ಕನ್ನಡ ಕಾದಂಬರಿಯಲ್ಲಿ. ಇದೂ ಸಹ ಒಬ್ಬ ಬ್ರಾಹ್ಮಣ ಸಮಾಜದ ಧರ್ಮಿಷ್ಟನೂ, ಪಂಡಿತನೂ ಆದ ಶ್ರೀನಿವಾಸಶ್ರೋತ್ರಿ ಹಾಗೂ ಯೌವನವತಿಯಾದ ಆತನ ವಿಧವೆ ಸೊಸೆ ಕಾತ್ಯಾಯಿನಿಯರ ನಡುವಿನ ಮುಖಾಮುಖಿ ಕತೆ, ಶ್ರೋತ್ರಿಯು ಅತ್ಯಂತ ಕ್ಷಮಾಶೀಲನಾದರೂ ತಾನು ನೆಚ್ಚಿ ಬದುಕಿನ ಮೌಲ್ಯಗಳನ್ನು ಯಾವ ಕಾರಣಕ್ಕೂ ಬಿಟ್ಟಿಕೊಡದವನು ಆತನ ಸೊಸೆ ಅದೇ ಸಂಸ್ಕಾರದಲ್ಲಿ ಹುಟ್ಟಿ ಬೆಳೆದವಳಾದರೂ ಪರಂಪರೆಯ ಚಿಪ್ಪಿನಿಂದ ಆಧುನಿಕ ಪರಿಸರಕ್ಕೆ 'ಹೊಸಿಲು ದಾಟಿದವಳು'. ಅವಳ ಯೌವನ, ಗಂಡ ಸತ್ತ ಮೇಲೆ ಮುಂದುವರೆಸಿದ ಆಕೆಯ ಕಾಲೇಜು ವಿದ್ಯಾಭ್ಯಾಸ ಹಾಗೂ ಅವಳ ಬಗ್ಗೆ ಕಾಲೇಜಿನ ಯುವ ಅಧ್ಯಾಪಕನೊಬ್ಬನ ಸಹಾನುಭೂತಿ ಹಾಗೂ ಅನುರಾಗ ಅವಳನ್ನು ನಿಧಾನವಾಗಿ ಬಂಡಾಯದ ಹಾದಿಗೆ ದೂಡುತ್ತವೆ.

ಭೈರಪ್ಪನವರು ಈ ಕಾದಂಬರಿಯ ಮುಖ್ಯಧಾರೆಯನ್ನು ಇಪ್ಪತ್ತು–ಮೂವತ್ತು ವರ್ಷಗಳ ಹಿಂದೆ ಕನ್ನಡ ಕಾದಂಬರಿಕಾರರಿಗೆ ತುಂಬಾ ಪ್ರಿಯವಾಗಿದ್ದ ವಿಧವೆ ವಿವಾಹದ ಸಮರ್ಥನೆ, ಮತ್ತು ಕುರುಡು ಬ್ರಾಹ್ಮಣಿಕೆ ಹಾಗೂ ಕುರುಡು ಪ್ರೇಮದ ನಡುವಿನ ತಾಕಲಾಟ ಕುರಿತ ಆಲಾಪ ಪ್ರಲಾಪದ ಹಳೆಯ ಜಾಡಿನಿಂದ ಬದಲಾಯಿಸಿ ಬೇರೆ ಮಟ್ಟಕ್ಕೆ ಏರಿಸಿದ್ದಾರೆ, ಇಲ್ಲಿನ ಮುಖಾಮುಖಿ ಎರಡು ಜೀವನ ದರ್ಶನಗಳು, ಎರಡು ಸಂಸ್ಕಾರಗಳ ನಡುವೆ ತನ್ನ ಸೊಸೆಯ ಮರು ಮದುವೆಯ ನಿರ್ಧಾರದಿಂದ ಶ್ರೋತ್ರಿಯರಿಗೆ ಅವರ್ಣನೀಯಯಾತನೆ ಉಂಟಾಗುತ್ತದೆ. ಆದರೂ ಇಂಥ ಧರ್ಮದ್ರೋಹ, ವಂಶದ್ರೋಹದ ಎದುರಿಗೆ ಆತ ಒಮ್ಮೆಯೂ ಕ್ರೋಧದ ಹಾರಾಟ ಚೀರಾಟಕ್ಕೆ ಬಲಿಯಾಗುವುದಿಲ್ಲ. ಈ

ಎಲ್ಲಾ ಮುಖಾಮುಖೀ ಬೌದ್ಧಿಕ, ನೈತಿಕ ಹಾಗೂ ಧಾರ್ಮಿಕ ವಾದ ವಿವಾದಗಳ, ಸಭ್ಯ ನಡವಳಿಕೆಗಳು ಎದುರಾಟವಾಗುತ್ತವೆ. ಮದುವೆಯ ಮುಖ್ಯ ಉದ್ದೇಶ ವಂಶವೃಕ್ಷದ ಪಾಲನೆ ಒಮ್ಮೆ ಮಗ ಹುಟ್ಟಿದ ಮೇಲೆ ಮದುವೆಯ ಉದ್ದೇಶ ಸಾರ್ಥಕವಾಯಿತು ಎಂಬುದು ಶ್ರೋತ್ರಿಯವರ ವಿಚಾರ. ಆದರೆ ಸೊಸೆ ಕಾತ್ಯಾಯಿನಿ ಈ ವಿಚಾರಧಾರೆಯನ್ನು ಹುರುಪಿನಿಂದ, ಬಿರುಸಿನಿಂದ ಎದುರಿಸಿ ಆಧುನಿಕ ಮಾನವೀಯ ದೃಷ್ಟಿಕೋನವನ್ನು ಮಂಡಿಸುತ್ತಾನೆ. ಈ ಚರ್ಚೆ ಇತ್ಯರ್ಥದಲ್ಲಿ ಕೊನೆಗಾಣೂವುದಿಲ್ಲ ಕೊನೆಗಾಣುವಂತದ್ದೂ ಅಲ್ಲ. ತನ್ನ ಎರಡನೆ ಮದುವೆಯ ನಂತರ ಮಗನನ್ನು ಕರೆದುಕೊಂಡು ಹೋಗಲು ಬಂದ ಕಾತ್ಯಾಯಿನಿಗೆ ಮಾವ ಶ್ರೋತ್ರಿಯು ತನ್ನ ವಂಶವೃಕ್ಷಕ್ಕೆ ಈ ಕಡೆಯ ಆಘಾತವನ್ನು ಕೊಡಬಾರದೆಂದು ಆಕೆಯನ್ನು ಕೇಳಿಕೊಳ್ಳುತ್ತಾನೆ. ಶ್ರೋತ್ರಿಯವರ ವಂಶದ ಕುಡಿ ಇದೊಂದೇ ಅದನ್ನು ಆಕೆ ಹೋಯ್ದರೆ ಅವನ ವಂಶ ಅಲ್ಲಿಗೆ ಮುಗಿಯಿತು. ಅವಳು ಈ ವಾದದ ಮುಂದೆ ಎದೆಬಿರಿಯುವ ದುಃಖದಿಂದ ಮನ ಸೋಲುತ್ತಾಳೆ. ಆದರೆ ಬದುಕು, ಅಥವಾ ಕಾದಂಬರಿಯ ಕಥಾನಕ ಎರಡು ಅನಿರೀಕ್ಷಿತ ತಿರುವುಗಳನ್ನು ಹಿಡಿಯುತ್ತದೆ. ಕಾತ್ಯಾಯಿನಿಗೆ ಒಂದಾದ ಮೇಲೆ ಒಂದರಂತೆ ಮೂರು ಗರ್ಭಸ್ರಾವಗಳಾಗುತ್ತವೆ. ಎರಡನೆ ಮದುವೆಯಿಂದ ಅವಳಿಗೆ ಸಂತಾನ ಪ್ರಾಪ್ತಿ ಇಲ್ಲವೆಂದು ಆಕೆ ಮನಗಾಣುತ್ತಾಳೆ. ಅಲ್ಲಿಂದ ಮುಂದೆ ಅವಳ ಪರಿತಾಪದ ವೇದನೆಯಿಂದ ಅವಳ ಆರೋಗ್ಯ ಸಂಪೂರ್ಣ ಶ್ಥಿತಿಲವಾಗುತ್ತವೆ. ಈ ಗರ್ಭಪಾತ ತನ್ನ ಪೂರ್ವಜರ ಜೀವನ ಮಾರ್ಗವನ್ನು ತಿಸ್ಕರಿಸಿದುದರ ಶಿಕ್ಷೆಯೇ ಮತ್ತೆ ತನ್ನ ಮಗ ಅವಳ ಕಲಿಸುವ ಕಾಲೇಜಿಗೆ ಸೇರಿದ್ದು, ಅವಳನ್ನು ಮಾತನಾಡಿಸಲು ಹೇಸಿ ಅವಳಿಂದ ಮತ್ತು ಅವಳ ಕಾಲೇಜಿನಿಂದ ದೂರು ಓಡುತ್ತಾನೆ.ಇದು ಅವಳ ಪಾಲಿಗೆ ಕಡೆಯ ಪೆಟ್ಟು ಪಾಪಪ್ರಜ್ಞೆ ಮತ್ತು ವೈಫಲ್ಯದಿಂದ ಒಳಗೊಳಗೇ ದಹಿಸುತ್ತ ಹತಾಶಳಾಗಿ ಆಕೆ ಬದುಕುವ ಇಚ್ಛೆಯನ್ನು ಕಳೆದುಕೊಳ್ಳುತ್ತಾಳೆ. ಹೀಗಾಗಿ ಅವಳ ಆಧುನಿಕತೆ ಹೊಸ ಬದುಕಿನ ಹರಿಕಾರನಾಗಿರದೆ. ಈ ಎಲ್ಲ ಶ್ರಮದ ಪರಿಣಾಮ ಅವಳ ಪಾಲಿಗೆ ಭಯ ಭ್ರಷ್ಟತ್ವ

ಇನ್ನೊಂದು ಕಡೆ ಶ್ರೋತ್ರಿಯರಿಗೆ ತಾನು ನಂಬಿ ತಿಳಿದು 'ಬಾಳಿದಂತೆ ತನ್ನ ತಂದೆಯ ಔರಸ ಪುತ್ರನಾಗಿರದೆ ತನ್ನ ತಾಯಿಯ ನಿಯೋಗ ಸಂತಾನವೆಂದು ತಿಳಿದು ಬರುತ್ತದೆ. ಪುತ್ರಹೀನನಾದ ತನ್ನ ತಮ್ಮನಿಗೆ ತನ್ನ ಆಸ್ತಿ ಹೋಗುವುದನ್ನು ತಪ್ಪಿಸಿ ಅದನ್ನು ತನ್ನ ವಂಶವೃಕ್ಷದಲ್ಲೇ ಉಳಿಸುವ ನೀಚ ಉದ್ದೇಶದಿಂದ ಗೊಡ್ಡನಾದ ಶ್ರೋತ್ರಿಯ ತನ್ನ ಹೆಂಡತಿಯನ್ನು ದಾರಿಹೋಕ ಅತಿಥಿಯೊಬ್ಬನಿಗೆ ತಲೆ ಹಿಡಿದು ಆಕೆಗೆ ದಾನ ಮಾಡಿಸಿದ ಕಾರಣ ಜನಿಸಿದ ಸಂತಾನ ನಾನು ಎಂದು ಶ್ರೋತ್ರಿ ತಿಳಿದು ತತ್ತರಿಸಿ ಹೋಗತ್ತಾನೆ. ಇಲ್ಲಿ ಧರ್ಮಸೂಕ್ಷ್ಮತೆಯ ಒಳಸಂಕಟ ವ್ಯಕ್ತವಾಗಿದೆ. ಕಾತ್ಯಾಯಿನಿಯನ್ನು ನೆನೆದು ಆಕೆಯನ್ನು ನೋಡಲು ಹೋಗುವುದು, ಕೊನೆಯಲ್ಲಿ ಆಕೆಯ ಸಂಸ್ಕಾರದ ಹೊಣೆಯನ್ನು ಮೊಮ್ಮಗನಿಗೆ ಮಾಡುವಂತೆ ತಾನೆ ನಿರ್ಧರಿಸಿ ಹೇಳುತ್ತಾನೆ. ಇಲ್ಲಿ ಮಾವ, ಸೊಸೆಯ ಬದುಕಿನ ಸಂಕೀರ್ಣತೆ ಒಂದು ವಿಡಂಬನೆಯಲ್ಲಿ ತುದಿ ಮುಟ್ಟುತ್ತದೆ. ಇತ್ತ ಕಾತ್ಯಾಯಿನಿ ತನ್ನ ಆಧುನಿಕತೆಯ ಪ್ರಯೋಗದಲ್ಲಿ ಚಿನ್ನವೆಂದು ನಂಬಿ ಹೊರಟಿದ್ದು ಕಾಗೆ ಬಂಗಾರವಾಗಿ, ತನ್ನ ಮಾವನ ನಂಬಿಕೆಗಳಿಗೆ ಸಾಗುತ್ತ ಮತ್ತೊಮ್ಮೆ ಆಕರ್ಷಿತಳಾಗುತ್ತಿರುವಾಗ ಅತ್ತ ಆತನು ಬದುಕಿನ ಆಧಾರಭೂತವಾದ ಧರ್ಮದಲ್ಲಿ ಆತನಿಗೆ ನೆಲೆ ತಪ್ಪಿದೆ.

ಆದರೆ ಈಗ ಅದನ್ನು ಅರಿಯಲಾರದಷ್ಟು ಅವಳು ಸಾವಿನ ಅಂಚು ತಲುಪಿರುವ ರೋಗಿ. ಕಾದಂಬರಿಯ ಪ್ರಶ್ನೆ ಈಗ ಹೆಮ್ಮರವಾಗಿ ನಿಂತಿದೆ. ಒಳ್ಳೆ ಜೀವನ ಯಾವುದು? ಪರಂಪರಾಗತ ಋಜು ಮಾರ್ಗವೋ, ತರ್ಕ ಸಿದ್ಧವಾದ ಆಧುನಿಕತೆಯೋ? ಎರಡು ಅಲ್ಲ ಏಕೆಂದರೆ ಎರಡು ಪಕ್ಷಗಳು ವಿಫಲವಾಗಿವೆ. ತನ್ನ ಜನ್ಮ ರಹಸ್ಯದ ಉಲ್ಕಾಪಾತದಿಂದ ಜರ್ಝರಿತನಾದ ಶ್ರೋತ್ರಿಯು ತಾನು ಸನ್ಯಾಸತ್ವ ಸ್ವೀಕರಿಸುವ ಮುಂಚೆ ಕಾತ್ಯಾಯಿನಿಯನ್ನು ಭೇಟಿ ಕರುಣಾದ್ರ ಸನ್ನಿವೇಶವಾಗಿದೆ. ಹೀಗೆ ಭೈರಪ್ಪನವರು ವಂಶವೃಕ್ಷ ಕಾದಂಬರಿಯು ವಿಸ್ತಾರವಾದ ಚಿತ್ರಿತ ಕಥೆ. ಸಂಸ್ಕಾರ ಹೆಚ್ಚು ಆಳವಾದ ಗೋಡೆಗಳ ಹಂದರ ಈ ಎರಡು ಕಾದಂಬರಿಗಳು ಆಧುನಿಕ ಮೌಲ್ಯಗಳ ಪರಂಪರೆಯ ಬದುಕಿನಲ್ಲಿ ಎಬ್ಬಿಸುವ ಸಮಸ್ಯೆಗಳು.

ಈ ಕಾದಂಬರಿಗಳು ಧರ್ಮದಲ್ಲಿ ವಿಶ್ವಾಸ ಹಾಗೂ ತರ್ಕಶೀಲ ಮಾನವೀಯತೆಗಳನ್ನು ಎದುರುಬದುರಾಗಿ ನಿಲ್ಲಿಸಿ ತಾಳೆ ಹಾಗೂ ತಾರತಮ್ಯಗಳನ್ನು ನಿರೂಪಿಸುತ್ತವೆ. ಸಂಸ್ಕಾರ ಕಾದಂಬರಿ ಸಂಪ್ರದಾಯವನ್ನು ತಿರಸ್ಕರಿಸಿ ಆಧುನಿಕತೆಗೆ ಮನವೊಲಿಸಿದರೆ, ವಂಶವೃಕ್ಷ ಕಾದಂಬರಿಯು ಆಧುನಿಕತೆಯನ್ನು ತಿರಸ್ಕರಿಸಿ ಸಂಪ್ರದಾಯಕ್ಕೆ ಹಿಂದಿರುಗುತ್ತದೆ. ಸಂಸ್ಕಾರವು ಸಮಸ್ಯೆಗೆ ವ್ಯವಸ್ಥೆಯ ಹೊರಗೆ ಪರಿಹಾರ ಹುಡುಕಿದರೆ, ವಂಶವೃಕ್ಷವು ಅದರ ಒಳಗೆ ಹುಡುಕಿ ಪಡೆಯುತ್ತದೆ. ವಂಶವೃಕ್ಷದಲ್ಲಿ ಗೆಲ್ಲುವುದು ಕಾತ್ಯಾಯಿನಿಯ ಜೀವನ ಮಾರ್ಗ, ಸಂಸ್ಕಾರದಲ್ಲಿ ಗೆಲ್ಲುವುದು ಪ್ರಾಣೇಶಾಚಾರ್ಯರ ಜೀವನ ಮಾರ್ಗ. ಹೀಗೆ ತಮ್ಮ ಸಾಹಿತ್ಯ ಕೃತಿಗಳ ಮೂಲಕ ಅನಂತಮೂರ್ತಿ ಮತ್ತು ಭೈರಪ್ಪನವರು ಸಮಕಾಲೀನ ಪ್ರಜ್ಞೆ ಕಾದಂಬರಿಗಳಲ್ಲಿ ವ್ಯಕ್ತವಾಗಿದೆ. ಕೊನೆಯದಾಗಿ ಈ ಎರಡು ಕಾದಂಬರಿಗಳು ಬ್ರಾಹ್ಮಣ ಸಮಾಜದ ಹುಳುಕನ್ನು , ಕೊಳಕನ್ನು ಹೊರಗೆಳೆಯುತ್ತವೆ. ಬ್ರಾಹ್ಮಣ ಮೂಲದ ಲೇಖಕರು ಬರೆದ ಈ ಕೃತಿಗಳು. ಬ್ರಾಹ್ಮಣರ ಸಮಾಜದ ಮೂಲ ನಂಬಿಕೆಗಳನ್ನು ತಿಳಿಸುವಂತಹ ಕಾದಂಬರಿಗಳಾಗಿ ಕೆಲವು ಸಮಾನವಾದ ಅಂಶಗಳು ಕಂಡು ಬಂದಿವೆ. ಪ್ರಾಣೇಶಾಚಾರ್ಯ-ಶ್ರೀನಿವಾಸಶ್ರೋತ್ರಿ, ಭಾಗೀರತಿ-ಭಾಗೀರತಮ್ಮ ಪಾತ್ರಗಳಲ್ಲಿ ಸಮಾನವಾದ ಸಾಮ್ಯತೆಗಳನ್ನು ಕಂಡರೆ, ಎರಡರಲ್ಲು ಕಥೆ ಬ್ರಾಹ್ಮಣ ಸಮಾಜದ ನಂಬಿಕೆಗಳನ್ನು ತಿಳಿಸುವ ಹಾಗೂ ನವ್ಯ ಸಾಹಿತ್ಯದ ಭಾಷೆ, ಶೈಲಿಗಳು ಎರಡು ಕಾದಂಬರಿಗಳಲ್ಲಿ ವ್ಯಕ್ತವಾಗಿವೆ. ಈ ಮೂಲಕ ಲೇಖಕರು ಕಾವ್ಯದ ದೃಷ್ಟಿ-ಧೋರಣೆಗಳನ್ನು ವ್ಯಕ್ತಪಡಿಸುತ್ತವೆ.

## ಉಪಸಂಹಾರ

ಸಂಸ್ಕಾರ–ವಂಶವೃಕ್ಷ ಈ ಎರಡು ಕಾದಂಬರಿಗಳು ನವ್ಯ ಧೋರಣೆಯನ್ನು ಹೊಂದಿದ್ದು, ಬ್ರಾಹ್ಮಣ ಸಮಾಜದ ನಂಬಿಕೆ, ಸಂಪ್ರದಾಯ ಬದುಕನ್ನು ಚಿತ್ರಿಸುವ ಕಾದಂಬರಿಗಳಾಗಿವೆ. ಈ ಕಾದಂಬರಿಗಳು ವಸ್ತು ವಿಷಯದಲ್ಲಿ ಸಮಾನ ಅಂಶಗಳು ಕಂಡುಬರುತ್ತದೆ. ಪಾತ್ರಗಳು ಕೆಲವು ಸನ್ನಿವೇಶಗಳಲ್ಲಿ ಎರಡು ಕಾದಂಬರಿಗಳು ಸಾಮ್ಯತೆಯನ್ನು ಹೊಂದಿದೆ. ಪ್ರಾಣೇಶಾಚಾರ್ಯರು ಮತ್ತು ಶ್ರೀನಿವಾಸಶ್ರೋತ್ರಿಯ ಪಾತ್ರಗಳಲ್ಲಿ ಸಮಾನವಾದ ಧರ್ಮದ ಸೂಕ್ಷ್ಮವಿಚಾರಗಳನ್ನು ಹೊಂದಿರುವ ಪಾತ್ರಗಳಾಗಿ, ಪ್ರಾಣೇಶಾಚಾರ್ಯನ ಪತ್ನಿ ಭಾಗೀರತಿ, ಶ್ರೀನಿವಾಸಶ್ರೋತ್ರಿಯ ಪತ್ನಿ ಭಾಗೀರತಮ್ಮ ಎರಡು ಪಾತ್ರಗಳು ಒಂದೇ ರೀತಿಯಲ್ಲಿ ಅಂದರೆ, ತೀವ್ರ ಅನಾರೋಗ್ಯದ ಕಾರಣದಿಂದ ತಮ್ಮ ಪತಿಗಳಿಗೆ ಲೈಂಗಿಕ ಸುಖ ಕೊಡುವಷ್ಟು ಶಕ್ತವಾಗಿಲ್ಲ. ಈ ಎರಡು ಪಾತ್ರಗಳು ತಮ್ಮ ಪತಿಯರಿಗೆ ಮತ್ತೊಂದು ಮದುವೆ ಮಾಡಿಕೊಳ್ಳುವಂತೆ ಒತ್ತಾಯ ಮಾಡುತ್ತವೆ. ನವ್ಯ ಸಾಹಿತ್ಯದಲ್ಲಿನ ಪ್ರಗತಿಪರ ಚಿಂತನೆ, ಸಾಂಕೇತಿಕತೆ. ದ್ವಂದ್ವತೆ, ವ್ಯಕ್ತಿ ಸ್ವಾತಂತ್ರ್ಯದಂತಹ ಸಮಾನವಾದ ಅಂಶಗಳು ಎರಡರಲ್ಲೂ ಕಾಣಬಹುದು. ಬ್ರಾಹ್ಮಣ ಸಮಾಜದ ನಂಬಿಕೆ, ಆಚರಣೆ, ಪೊಳ್ಳು ಸಂಪ್ರದಾಯ ಅದರೊಟ್ಟಿಗೆ ಸುತ್ತಿಕೊಳ್ಳುವ ನಾರಣಪ್ಪನ ಸಂಸ್ಕಾರದ ವಿಚಾರ, ಬ್ರಾಹ್ಮಣರ ನಂಬಿಕೆಗೆ, ಧರ್ಮಸೂಷ್ಮತೆಗೆ ಕಂಟಕವಾಗುತ್ತದೆ. ಎಲ್ಲರು ಸಂಸ್ಕಾರ ಮಾಡದ ಹೊರತು ಊಟ ಮಾಡುವಂತಿಲ್ಲ. ನಾರಣಪ್ಪ ಸತ್ತು ಸಮಸ್ಯೆಯಾಗಿ ಇಡೀ ಅಗ್ರಹಾರದ ಜನರಿಗೆ ಕಂಟಕವಾಗಿದ್ದಾನೆ. ಬದುಕಿನಲ್ಲಿ ವೈರಿ ಸತ್ತು ಅನ್ನ ಕಂಟಕ, ಶವವಾಗಿ ಇನ್ನೂ ಸಮಸ್ಯೆಯೆಂಬ ಮಾತು ಬ್ರಾಹ್ಮಣ ಸಮಾಜದ ನಂಬಿಕೆಗೆ ಸಾಕ್ಷಿಯಾಗಿ ನಿಲ್ಲುತ್ತದೆ.

ಹಾಗೆಯೇ ವಂಶವೃಕ್ಷದ ಕಾತ್ಯಾಯಿನಿ ಎರಡನೆ ಮದುವೆಯಾಗಿ ತನ್ನ ಮಗ ಚೀನಿಯನ್ನು ಕೇಳ ಬಂದು ಮಾವ ಕೊಡಲು ನಿರಾಕರಿಸಿದ್ದ ಮತ್ತೆ ಆಕೆ ಈಗ ಗರ್ಭಿಣಿಯಾಗಿ ಒಂದಲ್ಲ ಮೂರು ಬಾರಿ ಗರ್ಭಪಾತವಾಗುವುದು. ಅದಕ್ಕೆ ಕಾರಣ ಪೂರ್ವಜರ ಧರ್ಮನಿಷ್ಠೆಗೆ ವಿರುದ್ದವಾಗಿ ನಡೆದುಕೊಂಡುದರ ಫಲ ಎನ್ನುವಲ್ಲಿ ಧರ್ಮ ಸಂಸ್ಕಾರದ ಸೂಕ್ಷ್ಮತೆಯನ್ನು ಕಾಣಬಹುದು. ಶ್ರೀನಿವಾಸಶ್ರೋತ್ರಿಯ ಅಧ್ಯಯನ, ನಂಬಿಕೆ, ಪೂಜೆ ಪುನಸ್ಕಾರ, ಪ್ರಾಣೇಶಾಚಾರ್ಯರ ಪೂಜೆ ಸಂಧ್ಯಾವಂದನೆ ಇವುಗಳಲ್ಲಿ ಸಮಾನವಾದ ಅಂಶಗಳಿವೆ.

ಅನಂತಮೂರ್ತಿ ಬ್ರಾಹ್ಮಣ ಸಮುದಾಯದ ಪೊಳ್ಳುತನವನ್ನು ನಾರಣಪ್ಪನ, ಮಹಾಬಲ ಹಾಗೂ ಪ್ರಾಣೇಶಾಚಾರ್ಯರ ಮೂಲಕ ವ್ಯಕ್ತಪಡಿಸಿದ್ದಾರೆ. ಭೈರಪ್ಪನವರು ಕಾತ್ಯಾಯಿನಿ ರಾಜರಾಯರ ಮೂಲಕ ಸಾಂಪ್ರದಾಯಿಕ ಸನಾತನ ಧರ್ಮವನ್ನು ಮೀರಿ ಬಂಡಾಯದ ಮೂಲಕ ಆಧುನಿಕತೆಯ ವೈಚಾರಿಕತೆಯ ನಿಲುವನ್ನು ಸಮರ್ಥಿಸುವಂತೆ ಕಾತ್ಯಾಯಿನಿ ಪಾತ್ರವನ್ನು, ಆಧುನಿಕ ಸಮಾಜದ ಆದರ್ಶ ವ್ಯಕ್ತಿಯಾಗಿ ರಾಜರಾಯರನ್ನು ಪಾತ್ರವನ್ನು ಚಿತ್ರಿಸಿದ್ದಾರೆ.

ಈ ಎರಡು ಕಾದಬರಿಗಳಲ್ಲಿ ಮಾನವನ ಬದುಕಿನಲ್ಲಿ ಧರ್ಮ, ಜಾತಿಯನ್ನು ಮೀರಿ ಬದುಕನ್ನು ಅನುಭವಿಸುವ ವಾಸ್ತವನ್ನು ಒಪ್ಪಿಕೊಂಡು ಬಾಳುವಂತ ನೈಜ ಚಿತ್ರಣವನ್ನು ನಾರಣಪ್ಪನ ಪಾತ್ರದ ಮೂಲಕ ಅನಂತಮೂರ್ತಿರವರು, ಕಾತ್ಯಾಯಿನಿಯ ಪಾತ್ರದ ಮೂಲಕ ಭೈರಪ್ಪನವರು ಚಿತ್ರಿಸಿದ್ದಾರೆ. ನಾರಣಪ್ಪ, ಮಹಾಬಲ, ಶ್ರೀಪತಿ, ಚಂದ್ರಿ, ಬೆಳ್ಳಿ, ಮಾಲೇರಪುಟ್ಟ, ಪದ್ಮಾವತಿ, ಪ್ರಾಣೇಶಾಚಾರ್ಯರ ಪಾತ್ರಗಳು ಆಧುನಿಕ ಬದುಕಿನ ವಾಸ್ತವ ಜೀವನವನ್ನು, ಜಾತಿ, ಧರ್ಮವನ್ನು ಮೀರಿ ಬದುಕನ್ನು ಒಪ್ಪಿಕೊಳ್ಳುವಂತಹ ಪಾತ್ರಗಳಾಗಿ ಓದುಗರ ಗಮನವನ್ನು ಸೆಳೆಯುವಂತೆ ಮಾಡುತ್ತವೆ. ಹಾಗೆಯೇ ವಂಶವೃಕ್ಷದ ಶ್ರೀನಿವಾಸಶ್ರೋತ್ರಿ, ಕಾತ್ಯಾಯಿನಿ, ರಾಜರಾಯ, ಸದಾಶಿವರಾಯ, ನಾಗಲಕ್ಷ್ಮಿ, ಕರುಣಾರತ್ನೆ ಈ ಪಾತ್ರಗಳಲ್ಲಿ ಇದೇ ರೀತಿಯ ಅಂಶಗಳು ವ್ಯಕ್ತವಾಗಿದೆ.

ಮಾನವ ಸಹಜವಾದ ದೈಹಿಕ ಹಂಬಲವು ಧರ್ಮದ ಕಟ್ಟುಪಾಡುಗಳನ್ನು ಮೀರುವಂತಹ ಸನ್ನಿವೇಶವು ನಾರಣಪ್ಪ-ಚಂದ್ರಿಯ ಸಂಬಂಧ, ಶ್ರೀಪತಿ-ಬೆಳ್ಳಿಯ ಸಂಬಂಧ, ಮಹಾಬಲ-ವೇಶ್ಯೆಯೊಬ್ಬಳ ಸಂಬಂಧಗಳು, ಪ್ರಾಣೇಶಾಚಾರ್ಯರು ಮತ್ತು ಚಂದ್ರಿಯರ ಆಕಸ್ಮಿಕ ಸಮಾಗಮವು ಅದೇ ಅಂಶವನ್ನು ಹೇಳುತ್ತವೆ. ವಂಶವೃಕ್ಷದಲ್ಲಿ ಶ್ರೀನಿವಾಸಶ್ರೋತ್ರಿ-ಲಕ್ಷ್ಮಿಯರು ಮಾನಸಿಕವಾಗಿ ದೈಹಿಕ ಸಂಬಂಧಕ್ಕೆ ಸಿದ್ಧರಿದ್ದರು ಶ್ರೀನಿವಾಸಶ್ರೋತ್ರಿಯವರು ಧರ್ಮದ ಕಟ್ಟುಪಾಡಿಗೆ ಒಳಗಾಗುತ್ತಾರೆ. ರಾಜರಾಯ ಮತ್ತು ಕಾತ್ಯಾಯಿನಿಯರ ಸಂಬಂಧ ಹೊಸ ದಿಕ್ಕಿನತ್ತ ಬೆಳಕು ಚೆಲ್ಲುತ್ತದೆ. ಆಧುನಿಕ ಸಮಾಜದ ವಿಧವಾ ವಿವಾಹಕ್ಕೆ ಪ್ರೋತ್ಸಾಹಿಸುತ್ತದೆ. ಶ್ರೀನಿವಾಸಶ್ರೋತ್ರಿ ತಂದೆ ಅವನ ಹುಟ್ಟಿಗಾಗಿ ವಂಶವೃಕ್ಷದ ಬೆಳೆಗಾಗಿ ಮಾಡುವಂತಹ ಅನೈತಿಕ ಸಂತಾನ ಫಲ ಇದೆಲ್ಲವು ಮಾನವ ಸಹಜ ದೈಹಿಕ ಹಂಬಲ ಹಾಗೂ ಧರ್ಮದ ಸೂಕ್ಷ್ಮತೆಯಲ್ಲಿನ ಪೊಳ್ಳುತನವನ್ನು ಮೀರಿ ಕಾಲೇಜಿಗೆ ಸೇರುವ ಮತ್ತು ಎರಡನೆ ಮದುವೆ ಆಗುವ ಕಾತ್ಯಾಯಿನಿ ಮಾವ ಶ್ರೀನಿವಾಸಶ್ರೋತ್ರಿಯವರ ನಡುವಿನ ಮುಖಾಮುಖಿಗೆ ಸಾಕ್ಷಿಯಾಗಿ ನಿಲ್ಲುತ್ತದೆ.

ಹೀಗೆ ಎರಡು ಕಾದಂಬರಿಗಳಲ್ಲಿ ಕೆಲವು ಸಮಾನವಾದ ಅಂಶಗಳು ಕೆಲವು ವಿರುದ್ಧವಾದ ಭಾವನೆಗಳು ಕಂಡು ಬರುತ್ತವೆ. ಬ್ರಾಹ್ಮಣ ಸಮಾಜದ ನೈಜ ಚಿತ್ರಣ, ಬ್ರಾಹ್ಮಣದ ಧರ್ಮದ ಸೂಕ್ಷ್ಮತೆಯ ಅನಾವರಣ, ಮಾನವನ ಬದುಕಿನ ಸೂಕ್ಷ್ಮಸಂಕೀರ್ಣ ನೆಲೆಗಳನ್ನು ವ್ಯಕ್ತಪಡಿಸುವುದು ಈ ಅಧ್ಯಯನದ ಉದ್ದೇಶವಾಗಿದ್ದು, ಮಾನವ ಬದುಕಿನ ಸೂಕ್ಷ್ಮ ಸಂಕೀರ್ಣ ನೆಲೆಗಳನ್ನು ವೈಚಾರಿಕವಾಗಿ, ಪ್ರಗತಿಪರ ಧೋರಣೆಯಿಂದ ತಾತ್ವಿಕ ಹಾಗೂ ಮಾನವೀಯ ಅಂಶಗಳನ್ನು ಈ ಎರಡು ಕಾದಂಬರಿಗಳಲ್ಲಿ ಕಂಡುಬರುತ್ತವೆ. ಈ ರೀತಿಯ ಮಾನವೀಯ ಅಂಶಗಳು ಧರ್ಮಸಂಘರ್ಷ, ಪಾತ್ರಗಳ ಮುಖಾಮುಖಿ, ದ್ವಂದ್ವತೆ ವಾಸ್ತವಿಕತೆಯ ನೈಜ ಚಿತ್ರಣ, ಮಾನವ ಬದುಕಿನ ಅನಾವರಣ, ದೈಹಿಕ ಹಂಬಲ, ಧರ್ಮ, ಕಟ್ಟುಪಾಡುಗಳು ಅದರೊಟ್ಟಿಗೆ ಮನುಷ್ಯನ ಸೆಣಸಾಟ, ಹೊರಬರುವಲ್ಲಿ ಮಾಡುವ ಪ್ರಯತ್ನ ಇವೆಲ್ಲವನ್ನು ಲೇಖಕರು ಬಹಳ ಸೂಕ್ಷ್ಮ ದೃಷ್ಟಿಯಿಂದ ಸೃಜನಾತ್ಮಕವಾಗಿ ತಮ್ಮ ಕಾದಂಬರಿಗಳಲ್ಲಿ ಹೇಗೆ ವ್ಯಕ್ತಪಡಿಸಿದ್ದಾರೆ ಎಂಬುದು ಈ ಅಧ್ಯಯನದಲ್ಲಿ ವಿಶ್ಲೇಷಿಸಲಾಗಿದೆ.

ಈ ಲೇಖಕರುಗಳ ಗದ್ಯ ಶೈಲಿ, ಪಾತ್ರ ಪೋಷಣೆ, ಕಥೆ, ವಸ್ತುವಿನ್ಯಾಸ ಕಾದಂಬರಿಯ ಬೆಳವಣಿಗೆ, ತಂತ್ರ, ಸನ್ನಿವೇಶಗಳ ವರ್ಣನೆ ಬಹಳ ಸುಂದರವಾಗಿದ್ದು. ನವ್ಯ ಸಾಹಿತ್ಯದ ಲಕ್ಷಣಗಳನ್ನು ಬಳಸಿಕೊಂಡಿದ್ದಾರೆ. ಮಾನವ ಬದುಕಿನ ತಾಕಲಾಟ ಕಾದಂಬರಿಯಲ್ಲಿ ಬರುವ ಅನಿರೀಕ್ಷಿತ ತಿರುವು, ಬೆಳವಣಿಗೆ, ಸಂಸ್ಕಾರದ ಸಾಂಪ್ರದಾಯಿಕ ಭಂಡಾರ, ಆಧುನಿಕ ಸಮಸ್ಯೆಗಳಿಗೆ ಅಸಂಗತ ಸಂಪ್ರದಾಯದ ಕಾಳಜಿಗಳ ಅವಾಸ್ತವಗಳನ್ನು ವಿಶ್ಲೇಷಿಸುವುದು ಈ ಅಧ್ಯಯನದ ಮುಖ್ಯವಾದ ಉದ್ದೇಶವಾಗಿದ್ದು, ಈ ಎರಡು ಕಾದಂಬರಿಗಳು ಬ್ರಾಹ್ಮಣ ಸಮಾಜದ ಪ್ರತಿನಿಧಿಗಳಾಗಿ ಕಂಡು ಬಂದಿದೆ. ಲೇಖಕರಿಬ್ಬರ ಗದ್ಯ ಶೈಲಿ ಬೇರೆ ಬೇರೆ ಸಂಸ್ಕಾರ ಕಾದಂಬರಿಯ ಪ್ರಾಯೋಗಿಕವಾಗಿದ್ದರೆ ವಂಶವೃಕ್ಷದ್ದು ವಾಚಕ ಕೇಂದ್ರಿತವಾದ ಶೈಲಿಗಳಾಗಿವೆ. ಎರಡರಲ್ಲೂ ಸಮಾಜದ ಹುಳುಕನ್ನೂ ಕೊಳಕನ್ನು ಬೀದಿಗಿಡುತ್ತವೆ.

ಕನ್ನಡ ನವ್ಯ ಸಾಹಿತ್ಯ ಕೃತಿಗಳಲ್ಲಿ ಒಂದಾದ ಸಂಸ್ಕಾರವು ಶವಸಂಸ್ಕಾರದ ಸುತ್ತ ನಡೆಯುವ ಚರ್ಚೆ, ಆಚರಣೆ, ಪಾತ್ರಗಳು, ಕಥಾವಿನ್ಯಾಸ ಮೌಢ್ಯತೆಗಳನ್ನು ವ್ಯಕ್ತಪಡಿಸಿದರೆ, ಬದುಕಿನ ಸೂಕ್ಷ್ಮಸಂಕೀರ್ಣ ನೆಲೆಗಳ ಆಳಕ್ಕಿಳಿದು ಆ ಮೂಲಕ ವೈಚಾರಿಕತೆ, ತಾತ್ವಿಕ, ಮಾನವೀಯ ಅಂಶಗಳನ್ನು ಶೋಧಿಸುವ ಭೈರಪ್ಪನವರ ವಂಶವೃಕ್ಷ ಕಾದಂಬರಿ ಈ ಎರಡು ಕಾದಂಬರಿಗಳಲ್ಲಿ ವಸ್ತು ವಿಷಯ, ಸನ್ನಿವೇಶ, ಪಾತ್ರಚಿತ್ರಣ ಹಾಗೂ ಭಾಷಾಶೈಲಿಗಳನ್ನು ತೌಲನಿಕವಾಗಿ ಅಧ್ಯಯನ ಮಾಡುವುದು ಹಾಗೂ ಜಾತಿ ವ್ಯವಸ್ಥೆ, ನಂಬಿಕೆ. ಧರ್ಮ ಮುಂತಾದ ಅಂಶಗಳ ಬಗೆಗೆ ಚರ್ಚಿಸಿ ವಿಶ್ಲೇಷಣೆಯನ್ನು ಈ ಅಧ್ಯಯನದಲ್ಲಿ ಮಾಡಲಾಗಿದೆ.

## ಆಕರ ಗ್ರಂಥಗಳು /ಪರಾಮರ್ಶನ ಗ್ರಂಥಗಳು


೧) ಸಂಸ್ಕಾರ – ಯು.ಆರ್.ಅನಂತ ಮೂರ್ತಿ
ಅಕ್ಷರ ಪ್ರಕಾಶನ, ಹೆಗ್ಗೋಡು,
ಸಾಗರ–೨೦೦೩

೨) ವಂಶವೃಕ್ಷ – ಎಸ್.ಎಲ್.ಭೈರಪ್ಪ ಸಾಹಿತ್ಯ ಭಂಡಾರ,
ಜಂಗಮ ಮೇಸ್ತ್ರಿಗಲ್ಲಿ,
ಬಳಪೇಟೆ ಬೆಂಗಳೂರು.

೩) ಧರ್ಮ–ಕರ್ಮ ಜಿಜ್ಞಾಸೆ – ಡಾ॥ ಕೆ.ಎಲ್. ಗೋಪಾಲಕೃಷ್ಣಯ್ಯ
ನವಕರ್ನಾಟಕ ಪ್ರಕಾಶನ
೧೯೮೬ನೇ ಪ್ರಕಟಣೆ ಎಂಬೆಸಿ ಸೆಂಟರ್
ಕ್ರಸೆಂಟ್ ರಸ್ತೆ ಬೆಂಗಳೂರು.

೪) ಅನಂತ ಮುಖದ ಅನಂತಮೂರ್ತಿ – ಸಂಪಾದಕ ಅಹಿತಾನಲ (ನಾಗ ಐತಾಳ)
(ಯು.ಆರ್. ಅನಂತಮೂರ್ತಿಯವರ ಸಾಹಿತ್ಯ ಸಮೀಕ್ಷೆ)
ಸಾಹಿತ್ಯಾಂಜಲಿ ಮತ್ತು ಅಭಿನವ ಪ್ರಕಾಶನ
ಬೆಂಗಳೂರು.
ಮುದ್ರಣ ಧರಣಿ ಪ್ರಿಂಟರ್ಸ್ ಬೆಂಗಳೂರು ೧೦.

೫) ಸಂಸ್ಕಾರ– ವಂಶವೃಕ್ಷ ನಡೆದು
ಬಂದ ದಾರಿ – ಸಿ.ಎನ್. ರಾಮಚಂದ್ರನ್
೧೫/೦೮/೨೦೧೫ರ
(ಪ್ರಜವಾಣಿ ಪತ್ರಿಕೆ ವಿಶ್ಲೇಷಣೆ)

